ಒಂದಾಣೆ ಮಾಲೆಯ ಸಾಹಸಿ

# ಕುಡ್ವಿ ವಾಸುದೇವ ಶೆಣೈ

ಡಾ। ಸಬಿಹಾ ಭೂಮಿ ಗೌಡ





ಕಾಂತಾವರ ಕನ್ನಡ ಸಂಘದಿಂದ 'ನಾಡಿಗೆ ನಮಸ್ಕಾರ'

ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ

**ಕುಸುಮ - ೧೮**

## ಒಂದಾಣೆ ಮಾಲೆಯ ಸಾಹಸಿ

# ಕುಡ್ಪಿ ವಾಸುದೇವ ಶೆಣೈ

ಡಾ. ಸಬಿಹಾ ಭೂಮಿಗೌಡ

*ಅಧಿಕೃತ ಮಾರಾಟಗಾರರು*

**ಜ್ಞಾನಗಂಗಾ ಪುಸ್ತಕ ಮಳಿಗೆ**

ಪ್ರವಾಸಿ ಮಂದಿರದ ಎದುರು, ದರ್ಬೆ, ಪುತ್ತೂರು - 574202, (ದ.ಕ.)

ದೂರವಾಣಿ : 08251 - 232421

ಸಂಚಾರವಾಣಿ : 94804 51560

**Kudpi Vasudeva Shenoy :** - By Dr. Sabiha Bhumi Gowda
Published by Kannada Sangha, Kanthavara - 574129, Karkala Tq.,
Udupi Dist. Phone: 08258-276216, Mob. : 99007 01666

First Impression : 2008

Pages : 52



Price : Rs. 33.00

Printers : Manorama Offset Printers, Bejai, Mangalore.
Cover Design : John Chandran
D.T.P. : Prasadhan Computers, Bejai, Mangalore.

# ನಾಡಿಗೆ ನಮಸ್ಕಾರ

ನಮ್ಮ ನಾಡು ಅಂದಾಕ್ಷಣ ನಮ್ಮ ಕಣ್ಣ ಮುಂದೆ ಬರುವುದು ನೆಲ ಮತ್ತು ಜಲ. ಅವುಗಳಷ್ಟೇ ಅಲ್ಲ, ನಮ್ಮ ಮನಸ್ಸೂ ಈ ನಾಡಿನ ಒಂದು ಭಾಗ ಎಂಬ ಭಾವನೆಯ ರೂಪಕವಾಗಿ-ಸುವರ್ಣ ಕರ್ನಾಟಕದ ಸಂಭ್ರಮದಲ್ಲಿರುವ ನಾಡಿಗೆ, ಕಾಂತಾವರ ಕನ್ನಡ ಸಂಘವು ಅರ್ಪಿಸುವ ಪುಟ್ಟ ಕಾಣಿಕೆ- 'ನಾಡಿಗೆ ನಮಸ್ಕಾರ' ಎನ್ನುವ ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ.

ಕಾಂತಾವರ ಎನ್ನುವುದು ಉಡುಪಿ ಜಿಲ್ಲೆಯ ಕಾರ್ಕಳ ಸಮೀಪದ ಒಂದು ಹಳ್ಳಿಯ ಹೆಸರು. ಊರಿನ ಹೆಸರನ್ನೇ ಮುಖ್ಯವಾಗಿರಿಸಿಕೊಂಡು ಹುಟ್ಟಿದ (26 ಮೇ 1976) ಕನ್ನಡ ಸಂಘಕ್ಕೆ ಈಗ ಮೂವತ್ತರ ಯೌವನ. ನಾಡು ಸುವರ್ಣ ಸಂಭ್ರಮದ ಆಚರಣೆಯಲ್ಲಿರುವಾಗ ಸಂಘವು ಮೂವತ್ತರ ಯೌವನದಲ್ಲಿರುವುದು ಒಂದು ಯೋಗಾಯೋಗ. ಯುವ ಪ್ರತಿಭಾಶಕ್ತಿ ನಾಡನ್ನು ಹೇಗೆ ಕಟ್ಟಬಹುದು ಎಂಬುದಕ್ಕೆ ಸಂಕೇತವಾಗಿ ಈ ಗ್ರಂಥಮಾಲೆಯನ್ನು ರೂಪಿಸುವ ಸಂಕಲ್ಪ ನಮ್ಮದು.

ಈಗಲೂ ಹಳ್ಳಿಯಾಗಿಯೇ ಇರುವ ಊರಿನ ಹೆಸರಿನ ಗಡಿಗಳನ್ನು ಹರಿದೊಗೆದದ್ದು ಈ ಸಂಘ. ಅದು ಹುಟ್ಟಿದ ಮೊದಲ ವರುಷದಲ್ಲೇ (1976) ಮಾಡಿದ ಸಾಹಸ 'ದಕ್ಷಿಣ ಕನ್ನಡ ಕಾವ್ಯ' (1970-76) ಎಂಬ (ಆಗ ಯಾವ ಜಿಲ್ಲೆಯಲ್ಲೂ ಆಗದೇ ಇದ್ದ) ಜಿಲ್ಲೆಯ ಕಾವ್ಯ ಪರಂಪರೆಯನ್ನು ಗುರುತಿಸುವ ಆ್ಯಂಥಾಲಜಿಯ ಪ್ರಕಟಣೆ. ಅದರ ಜೊತೆಗೇ ಸಾಹಿತ್ಯಿಕ ವಿಚಾರಗಳನ್ನು ಜನಸಾಮಾನ್ಯರ ಮನೆಬಾಗಿಲಿಗೆ ತರುವ ಉದ್ದೇಶದ ಉಪನ್ಯಾಸ ಮಾಲೆ, ಗ್ರಂಥ ಪ್ರಕಟಣೆ, ವಿಚಾರಗೋಷ್ಠಿ, ಸಾಧಕರಿಗೆ ಸನ್ಮಾನ ಮೊದಲಾದ ಕಾರ್ಯಕ್ರಮಗಳು. ಈ ನಡುವೆ ನಂದಳಿಕೆಯ ವರಕವಿ ಮುದ್ದಣನ ಹೆಸರಿನಲ್ಲಿ ಮುದ್ದಣ ಸ್ಮಾರಕ ಕಾವ್ಯ ಸ್ಪರ್ಧೆಯ ಸ್ಥಾಪನೆ (1979). ತನ್ಮೂಲಕ - ಖಾಸಗಿಯಾಗಿ ಪ್ರಶಸ್ತಿಗಳೇ ಇಲ್ಲದಿದ್ದ ಆ ದಿನಗಳಲ್ಲಿ - ಸರಕಾರೇತರ ವಾಗಿಯೂ ಪ್ರಶಸ್ತಿಗಳನ್ನು ನೀಡಲು ಸಾಧ್ಯ (ನೀಡುವುದು ಅಗತ್ಯ) ಎಂಬ ಪರಿಕಲ್ಪನೆ.

ಆಮೇಲೆ, ಸಂಘಕ್ಕೆ 25 ವರುಷಗಳು ತುಂಬಿದ ಸಂದರ್ಭದಲ್ಲಿ (15 ಏಪ್ರಿಲ್ 2001) ರಾಜ್ಯಮಟ್ಟದ ಸಾಹಿತ್ಯ - ಸಂಸ್ಕೃತಿ ಸಮ್ಮೇಳನ ಮತ್ತು ಅದರ ಸವಿನೆನಪಿಗಾಗಿ ಮತ್ತೆ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' (1900-2000) ಎಂಬ ಬೃಹತ್ ಗ್ರಂಥದ (ಲಕ್ಷ ರೂಪಾಯಿಗಳಿಗೂ ಮಿಕ್ಕಿದ ವೆಚ್ಚದಲ್ಲಿ) ಪ್ರಕಟಣೆ. ಇದರಿಂದ ಪ್ರೇರಣೆಗೊಂಡ ಪುತ್ತೂರು ಕರ್ನಾಟಕ ಸಂಘವು 'ದಕ್ಷಿಣ ಕನ್ನಡದ ಶತಮಾನದ ಕತೆಗಳು' (1900-2000) ಎಂಬ ಬೃಹತ್ ಕಥಾ ಸಂಗ್ರಹದ ಪ್ರಕಟಣೆಗೆ ಕೈಹಾಕಿತು. ಒಂದು ಜಿಲ್ಲೆಯ ಗಡಿಯೊಳಗಿನ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಅಧ್ಯಯನ ಮತ್ತು ಪ್ರಕಾಶನವು ನಾಡನ್ನು ಅರಿಯುವ ಮತ್ತು ಎಚ್ಚರಿಸುವ ಕಾಯಕವೂ ಹೌದೆನ್ನುವಂಥ ಚಟುವಟಿಕೆಗಳಿಗೆ ಇದು ಮಾದರಿಯಾಯಿತು ಎನ್ನುವುದು ಈ ಹಳ್ಳಿಗೆ ಸಂದ ಗೌರವ.

ಕಾಂತಾವರದ ಮಣ್ಣಿಗೂ ಕರ್ನಾಟಕದ ಏಕೀಕರಣಕ್ಕೂ ನೇರ ಸಂಬಂಧ ಉಂಟು. ಈ ಮಣ್ಣಿನ ಮಗ, ಕಾಂತಾವರ ಬಾರಾಡಿ ಬೀಡು (ಕೆ. ಬಿ.) ಜಿನರಾಜ ಹೆಗ್ಡೆ ಅವರು ಏಕೀಕರಣದ ಅಗ್ರಗಣ್ಯ ನಾಯಕರಲ್ಲಿ ಒಬ್ಬರು. ಅವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಅವರ ನೆನಪು ಶಾಶ್ವತವಾಗಿರುವಂತೆ ಕಾಂತಾವರದಲ್ಲಿ ಕನ್ನಡ ಸಂಘವು 25 ಲಕ್ಷ ರೂಪಾಯಿಗಳ ವೆಚ್ಚದಲ್ಲಿ

(ಸರಕಾರದ ಸಹಾಯಧನ 12 ಲಕ್ಷ ರೂಪ್ಯಾಗಳು ಸೇರಿ) 'ಕನ್ನಡ ಭವನ'ವೊಂದನ್ನು ನಿರ್ಮಿಸಿತು. ಆ ಭವನದಲ್ಲೇ 'ಮುದ್ದಣ ಸ್ಮಾರಕ ಕಾವ್ಯ ಪ್ರಶಸ್ತಿ ಯೋಜನೆ'ಯ ಬೆಳ್ಳಿಹಬ್ಬವನ್ನು (7 ನವಂಬರ 2004) ಪ್ರಶಸ್ತಿ ಪುರಸ್ಕೃತರೆಲ್ಲರ ಸಮಕ್ಷಮದಲ್ಲಿ ಆಚರಿಸಿತು.

ಪ್ರತಿಯೊಂದು ಜಿಲ್ಲೆಗಳಲ್ಲೂ ಅಲ್ಲಿನ ಸಾಧಕರ ಅಧ್ಯಯನ ನಾಡಿನ ಒಟ್ಟು ಸಂಸ್ಕೃತಿಯ ಅನಾವರಣಕ್ಕೆ ಪೂರಕ ಎಂಬ ಹಿನ್ನೆಲೆಯಲ್ಲಿ - ಕಾಸರಗೋಡೂ ಸೇರಿದಂತೆ ಅಖಂಡ ದಕ್ಷಿಣ ಕನ್ನಡವು ಕನ್ನಡಕ್ಕೆ ನೀಡಿದ ಒಟ್ಟೂ ಕೊಡುಗೆಯ ಹಿನ್ನೆಲೆಯಲ್ಲಿರುವ ವ್ಯಕ್ತಿಗಳನ್ನು ಮುನ್ನಲೆಗೆ ತರುವ ಪ್ರಯತ್ನ ಈ ಮಾಲೆಯದ್ದು. "ಒಂದು ಜಿಲ್ಲೆಗೆ ಯಾಕೆ ಇದನ್ನು ಸೀಮಿತಗೊಳಿಸಿದಿರಿ? ಇದು ಸಂಕುಚಿತ ಮನೋಭಾವವಲ್ಲವೇ?" ಎಂಬ ಪ್ರಶ್ನೆ ನಮಗೆ ಇದಿರಾದರೆ ಅದಕ್ಕೆ ಉತ್ತರ ಸರಳ. ಪ್ರತಿ ಜಿಲ್ಲೆಯಲ್ಲೂ ಇಂಥ ಪ್ರಯತ್ನಗಳು ನಡೆಯಬೇಕು, ಒಂದು ಜಿಲ್ಲೆ - ಇನ್ನೊಂದು ಜಿಲ್ಲೆಗೆ ಈ ರೀತಿ ಆರೋಗ್ಯಪೂರ್ಣ ಸ್ಪರ್ಧೆಗೆ ಕಾರಣವಾಗಬೇಕು ಎಂಬ ನಿಲುವು ನಮ್ಮದು. ದುರದೃಷ್ಟ ಅಂದರೆ ಎರಡೆರಡು ಬಾರಿ 'ದಕ್ಷಿಣ ಕನ್ನಡ ಕಾವ್ಯ' ಎಂಬ ಆ್ಯಂಥಾಲಜಿಯನ್ನು ಸಂಘವು ಹೊರತಂದರೂ, ಉಳಿದ ಜಿಲ್ಲೆಗಳಲ್ಲಿ ಇಂಥ ಪ್ರಯತ್ನ ನಡೆದ ಪ್ರಕರಣ ನಮ್ಮ ಗಮನಕ್ಕೆ ಬಂದಿಲ್ಲ. ಎಲ್ಲವನ್ನೂ ಸರಕಾರ ಅಥವಾ ಅಕಾಡೆಮಿಗಳಿಂದ ನಿರೀಕ್ಷಿಸಲಾಗದು ಎಂಬ ಧೋರಣೆ ಗ್ರಾಮಾಂತರ ಪ್ರದೇಶದ ಈ ಕನ್ನಡ ಸಂಘದ್ದು.

ಈ ಗ್ರಂಥಮಾಲೆಯಲ್ಲಿ ಅನಾವರಣಗೊಳ್ಳುತ್ತಿರುವ ಜಿಲ್ಲೆಯ ಸಾಧಕರ ಸಾಧನೆ ಮಾತ್ರ ದೊಡ್ಡದು, ಉಳಿದವರದ್ದು ನಗಣ್ಯ ಎಂಬ ಭಾವನೆ ನಮ್ಮಲ್ಲಿಲ್ಲ. ಅಥವಾ ಆಯ್ಕೆಗೆ ಯಾವ ಮಾನದಂಡಗಳನ್ನಿಟ್ಟರೂ ಆಯ್ಕೆ ಖಂಡಿತ ಸುಲಭಸಾಧ್ಯವಾದದ್ದಲ್ಲ. ಹಾಗಾಗಿ ವಿಭಿನ್ನ ದೃಷ್ಟಿಕೋನ ಮತ್ತು ವೈವಿಧ್ಯಮಯ ಕ್ಷೇತ್ರಗಳ ಕಡೆಗೆ ಹೆಚ್ಚು ಒತ್ತು ನೀಡಿ ಈ ಮಾಲೆಯಲ್ಲಿ ಮೂವತ್ತು ಮಂದಿಯನ್ನಷ್ಟೇ ಆಯ್ಕೆ ಮಾಡಲಾಗಿದೆ. ಇಲ್ಲಿ ಅನಾವರಣಗೊಳ್ಳದೇ ಇರುವ ಇಂಥ ಸಾಧಕರು ಇನ್ನೂ ಹತ್ತಾರು ಮಂದಿ ಇದ್ದಾರೆ, ಅವರನ್ನೂ ಹೀಗೆ ಪರಿಚಯಿಸುವ ಕೆಲಸ ಆಗಬೇಕು ಎಂಬುದನ್ನು ಸಂಘವು ಖಂಡಿತ ಒಪ್ಪಿಕೊಳ್ಳುತ್ತದೆ; ಇಂಥ ಇನ್ನೊಂದು ಪ್ರಯತ್ನವನ್ನು ಸ್ವಾಗತಿಸುತ್ತದೆ.

**ಇಂತಹ ಯೋಜನೆಯ ಮೊದಲ ಕಂತಿಗೆ ನಾಡಿನಾದ್ಯಂತ ಸಿಕ್ಕಿದ ಪ್ರೋತ್ಸಾಹದಿಂದ ಇದೀಗ ಎರಡನೇ ಕಂತಿನ ಹತ್ತು ಕೃತಿಗಳು ಅನಾವರಣಗೊಳ್ಳುತ್ತಿವೆ.**

ಹೊತ್ತಗೆಗಳ ಮುದ್ರಣ ಮತ್ತು ಮಾರಾಟದಲ್ಲಿ ಸಕಲ ಸಹಾಯವನ್ನು ನೀಡಲು ಮುಂದಾಗಿರುವ ಜ್ಞಾನಗಂಗಾ ಪುಸ್ತಕ ಮಳಿಗೆ, ಪುತ್ತೂರು ಮತ್ತು ಪ್ರಕಾಶ ಕೊಡಂಕಿರಿ ಅವರ ಸಹಾಯ ದೊಡ್ಡದು.

ಪ್ರತಿಫಲಾಪೇಕ್ಷೆ ಬಯಸದೆ ಈ ಮಾಲೆಗೆ ಬರೆದ ಲೇಖಕರ ಔದಾರ್ಯ ಮತ್ತು ಅಂದವಾಗಿ ಡಿಟಿಪಿ ಮಾಡಿದ ಪ್ರಸಾಧನ್ ಕಂಪ್ಯೂಟರ್ಸ್, ಬಿಜೈ, ಮಂಗಳೂರು ಮತ್ತು ಅಂದವಾಗಿ ಮುದ್ರಿಸಿದ ಮನೋರಮಾ ಆಫ್‌ಸೆಟ್ ಪ್ರಿಂಟರ್ಸ್‌ನ ಬಂಧುಗಳ ಕೊಡುಗೆಗೆ ನಾವು ಕೃತಜ್ಞರು.

**ಕಾಂತಾವರ ಕನ್ನಡ ಸಂಘ** — **ಡಾ. ನಾ. ಮೊಗಸಾಲೆ**

ದಿ : ೧೪, ಜನವರಿ ೨೦೦೮ — ಕಾರ್ಯಾಧ್ಯಕ್ಷರು

# ಇವರೇ ನಮ್ಮ ಕುಡ್ಪಿಯವರು

**ಹೊ**ಸಗನ್ನಡ ಸಾಹಿತ್ಯದಲ್ಲಿ ದಕ್ಷಿಣ ಕನ್ನಡದ ಎರಡನೆಯ ತಲೆಮಾರಿನ ಬರಹಗಾರರಲ್ಲಿ ಪ್ರಮುಖರಾದ ಕುಡ್ಪಿ ವಾಸುದೇವ' ಶೆಣೈ ಅವರ ಕೊಡುಗೆ ಅನನ್ಯವಾಗಿದೆ. ಕತೆಗಾರರಾಗಿ, ನಾಟಕಕಾರರಾಗಿ, ವಿನೋದ ಮತ್ತು ವಿಡಂಬನಾ ಸಾಹಿತ್ಯದ ರಚಕರಾಗಿ, ಪತ್ರಿಕೋದ್ಯಮಿಯಾಗಿ, ರಂಗಪ್ರಯೋಗಕರ್ತರಾಗಿ ಇವರು ಹಲವು ನೆಲೆಗಳಲ್ಲಿ ಕೊಡುಗೆಯನ್ನು ನೀಡಿದ್ದಾರೆ. ಕನ್ನಡದ ಓದುಗ ವಲಯವನ್ನು ಬೆಳೆಸುವಲ್ಲಿ, ಸಾಹಿತ್ಯವನ್ನು ಓದುಗರ ಬಳಿ ಕೊಂಡೊಯ್ಯುವಲ್ಲಿ, ಹೊಸ ತಲೆಮಾರಿನ ಲೇಖಕರ ಪಡೆಯನ್ನು ನಿರ್ಮಾಣ ಮಾಡುವಲ್ಲಿ ಮತ್ತು ತನಗಿಂತ ಹಿರಿಯ ಮತ್ತು ಸಮಕಾಲೀನ ಬರಹಗಾರರನ್ನು ಒಗ್ಗೂಡಿಸಿ ಸಾಹಿತ್ಯದ ಕಾಯಕವನ್ನು ಕಟ್ಟುವಲ್ಲಿ ಅವರು ತೋರಿದ ನಿಷ್ಠೆ, ಪ್ರಾಮಾಣಿಕತೆ ಮತ್ತು ಶ್ರದ್ಧೆಗಳು ಸ್ಮರಣೀಯವಾಗಿವೆ.

ಮಂಗಳೂರಿನ ಸಮೀಪದ ಕುಡುಪು ಎಂಬ ಗ್ರಾಮ, ಕುಡ್ಪಿ ವಾಸುದೇವ ಶೆಣೈ ಅವರ ಹಿರಿಯರ ಊರು. ಹಿರಿಯರು ಕುಡುಪುವಿನಿಂದ ಮಂಗಳೂರಿಗೆ ವಲಸೆ ಬಂದರೂ, ಹಿಂದಿನ ನೆನಪಾಗಿ ಮನೆತನಕ್ಕೆ ಊರ ಹೆಸರನ್ನು ಅಂಟಿಸಿಕೊಂಡೇ ಸಾಗಿದರು. ಹೀಗೆ ಕುಡುಪು ಕುಡ್ಪಿ ಆಗಿ ಅವರ ಹೆಸರಿನ ಜೊತೆಗೆ ಅವಿನಾಭಾವ ಸಂಬಂಧವನ್ನು ಬೆಸೆದುಕೊಂಡಿತು. ವರ್ತಕರಾಗಿದ್ದ ಶ್ರೀ ಕುಡ್ಪಿ ನರಸಿಂಹ ಶೆಣೈ ಮತ್ತು ಶ್ರೀಮತಿ ಕಲ್ಯಾಣಿ ಬಾಯಿ ಅವರ ಮೂರನೆಯ ಮಗುವಾಗಿ ಶ್ರೀ ವಾಸುದೇವ ಶೆಣೈ ಅವರು ೧೯೦೭ ರ ಅಗಸ್ಟ್ ೨೯ರಂದು ಜನಿಸಿದರು. ಇವರಿಗೆ ಒಬ್ಬ ಅಣ್ಣ, ಒಬ್ಬ ಅಕ್ಕ, ಮೂವರು ತಮ್ಮಂದಿರು ಹಾಗೂ ನಾಲ್ವರು ತಂಗಿಯಂದಿರು. ವಾಸುದೇವ ಶೆಣೈ ಅವರ ಅಣ್ಣ ಮಾಧವ ಹನ್ನೊಂದರ ಎಳವೆಯಲ್ಲಿ ಟೈಫಾಯಿಡ್ ಜ್ವರಕ್ಕೆ ತುತ್ತಾಗಿದ್ದರು. ಇವರ ಕುಟುಂಬದ ಆರ್ಥಿಕ ಸ್ಥಿತಿಗತಿ ಅಷ್ಟಕ್ಕಷ್ಟೇ ಎಂಬಂತಿತ್ತು. ವಾಸುದೇವ ಶೆಣೈ ಅವರು ಹನ್ನೆರಡು ವರ್ಷದವರಿರುವಾಗಲೇ ತಮ್ಮ ತಂದೆಯನ್ನು ಕಳೆದುಕೊಂಡರು. ಅನಂತರ ಅವರ ಮತ್ತು ಅವರ ತಮ್ಮಂದಿರ ವಿದ್ಯಾಭ್ಯಾಸಕ್ಕೆ ಸೋದರಮಾವನಾದ ಶ್ರೀ ವರದರಾಜ್‌ರಾವ್ ಅವರು ಆಸರೆಯಾಗಿ ನಿಂತರು. ಶ್ರೀ ವರದರಾಜ್ ರಾವ್ ಅವರು ಸುಪ್ರಸಿದ್ಧ ವಕೀಲರಾಗಿದ್ದರು. ಅವರ ಮನೆಯಲ್ಲಿ ಇಂಗ್ಲಿಷ್ ಮತ್ತು ಕನ್ನಡದ ಪುಸ್ತಕ ಭಂಡಾರವೇ ಇತ್ತು. ಇದು ಎಳೆಯ ಕುಡ್ಪಿಯವರ ಸಾಹಿತ್ಯ ತೃಷೆಯನ್ನು ತಣಿಸಿದ್ದಲ್ಲದೆ, ಅವರಲ್ಲಿ ಸಾಹಿತ್ಯ ಕೃಷಿಗೆ ಪ್ರೇರಣೆಯನ್ನು ನೀಡಿರುವಂತಿದೆ.

ವಾಸುದೇವ ಶೆಣೈ ಅವರ ವಿದ್ಯಾಭ್ಯಾಸ ಮಂಗಳೂರಿನಲ್ಲೇ ಜರುಗಿತು. ಕೆನರಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದ ಶ್ರೀ ಎಂ.ಎನ್. ಕಾಮತ್ ಅವರು ವಾಸುದೇವ ಶೆಣೈ ಅವರಿಗೆ ಗುರುಗಳಾಗಿದ್ದರು. ಒಮ್ಮೆ ಕಾಮತ್ ಅವರು ಈ ಶಿಷ್ಯನ ಸ್ವರಚಿತ ಕವನವೊಂದನ್ನು ಮೆಚ್ಚಿ, ಒಂದು ಪೆನ್ನನ್ನು ಉಡುಗೊರೆಯಾಗಿ ನೀಡಿ, 'ಇದರಿಂದ ಒಳ್ಳೆಯ ಸಾಹಿತ್ಯವನ್ನೇ ರಚಿಸು' ಎಂದು ಹರಸಿದರಂತೆ. ಈ ಘಟನೆ ಕುಡ್ಪಿಯವರ ಮನಸ್ಸಿನ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಕಾಮತರ ಆದರ್ಶವನ್ನು ಅನುಸರಿಸಿ, ಇವರೂ ತಮ್ಮ ಜೀವನವನ್ನು ಸಾಹಿತ್ಯ ಮತ್ತು ಕಲಾರಂಗಕ್ಕೆ ಮೀಸಲಿಟ್ಟರು. ಎಸ್.ಎಸ್.ಎಲ್.ಸಿ.ವರೆಗೆ ಶಿಕ್ಷಣವನ್ನು ಪೂರೈಸಿದ ವಾಸುದೇವ ಶೆಣೈ ಅವರು ಅನಂತರ ಉದ್ಯೋಗರಂಗದತ್ತ ನಡೆದರು.

## ವೃತ್ತಿಜೀವನದ ಮೊದಲ ಹೆಜ್ಜೆಗಳು

ಉಡುಪಿಯ **ಪ್ರಭಾಕರ** ಪ್ರೆಸ್‌ನಲ್ಲಿ ಮೊತ್ತಮೊದಲು ತಮ್ಮ ವೃತ್ತಿಜೀವನವನ್ನು ಆರಂಭಿಸಿದ ವಾಸುದೇವ ಶೆಣೈ ಅವರು, ಅನಂತರ ಮಂಗಳೂರಿನ ಕಂಠೀರವ ಮುದ್ರಣಾಲಯದಲ್ಲಿ ದುಡಿದರು. ಮಂಗಳೂರಿನ ಅಂದಿನ ಪ್ರತಿಷ್ಠಿತ ಪತ್ರಿಕೆಗಳಾಗಿದ್ದ **ಸ್ವದೇಶಾಭಿಮಾನಿ** ಮತ್ತು **ಕಂಠೀರವ** ಪತ್ರಿಕೆಗಳಲ್ಲಿ ಸಹಸಂಪಾದಕರಾಗಿಯೂ ಇವರು ಕೆಲಸ ಮಾಡಿದರು. ೧೯೩೫ ರಲ್ಲಿ ಎಂದರೆ ತಮ್ಮ ಇಪ್ಪತ್ತೆಂಟನೆಯ ವಯಸ್ಸಿನಲ್ಲಿ **ಪ್ರಭಾತ** ಎಂಬ ಸ್ವಂತದ ವಾರಪತ್ರಿಕೆಯನ್ನು ಆರಂಭಿಸಿದರು. ೧೯೪೧ ರಲ್ಲಿ **ನವಭಾರತ** ಪತ್ರಿಕೆಯ ಪ್ರಪ್ರಥಮ ಕಾರ್ಯನಿರ್ವಾಹಕ ಸಂಪಾದಕರ ಹೊಣೆಗಾರಿಕೆಯನ್ನು ಹೊತ್ತುಕೊಂಡರು. ಅನಂತರದ ದಿನಗಳಲ್ಲಿ **ಪ್ರಭಾತ ಪ್ರಿಂಟರ್ಸ್ ಲಿಮಿಟೆಡ್** ಎಂಬ ಕಂಪೆನಿಯನ್ನು ಆರಂಭಿಸಿ, ಆ ಮುದ್ರಣಾಲಯದಲ್ಲಿ ತಮ್ಮ 'ಪ್ರಭಾತ' ಪತ್ರಿಕೆಯ ಜೊತೆ ಹಲವಾರು ಇತರ ಪತ್ರಿಕೆಗಳನ್ನು ಹಾಗೂ ಕೃತಿಗಳನ್ನು ಮುದ್ರಿಸಿ ಪ್ರಕಾಶಿಸಿದರು.

## ಕೌಟುಂಬಿಕ ಜೀವನ

೧೯೩೬ ರಲ್ಲಿ ವಾಸುದೇವ ಶೆಣೈ ಅವರು ದಾಂಪತ್ಯ ಜೀವನಕ್ಕೆ ಕಾಲಿಟ್ಟರು. ಬಂಟ್ವಾಳದ ಶ್ರೀಮತಿ ರಮಾಬಾಯಿ ಇವರ ಬಾಳಸಂಗಾತಿ. ಇವರಿಗೆ ಎಂಟು ಜನ ಮಕ್ಕಳು. ಎಲ್ಲರಿಗಿಂತ ಹಿರಿಯವರು ಡಾ. ವೀಣಾ ಇಸ್ಲೂರು. ಇವರು ಶಿವಮೊಗ್ಗದಲ್ಲಿ ಸಹ್ಯಾದ್ರಿ ಆಸ್ಪತ್ರೆಯನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ. ಅನಂತರದವರು ದಿವಂಗತ ಶ್ರೀ ಚಂದ್ರಕಾಂತ ಶೆಣೈ. ಮೂರನೆಯವರು ಶ್ರೀ ಶಶಿಕಾಂತ್ ಶೆಣೈ. ಇವರು ಬ್ಯಾಂಕ್ ಆಫ್ ಇಂಡಿಯಾದಲ್ಲಿ ಉದ್ಯೋಗದಲ್ಲಿದ್ದು ನಿವೃತ್ತರಾಗಿದ್ದಾರೆ. ಶ್ರೀಕಾಂತ ಶೆಣೈ ಅವರು ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಚೀಫ್ ಮ್ಯಾನೇಜರ್ ಆಗಿ ನಿವೃತ್ತರಾಗಿದ್ದಾರೆ. ಐದನೆಯವರಾದ ಡಾ. ಕೃಷ್ಣಕಾಂತ್ ಶೆಣೈ ಅವರು ಮನೋರೋಗ ತಜ್ಞರಾಗಿದ್ದು, ಪ್ರಸ್ತುತ ಇಂಗ್ಲೆಂಡಿನಲ್ಲಿ ವಾಸವಾಗಿದ್ದಾರೆ. ಆರನೆಯವರು ಡಾ.ಕಮಲಾಕಾಂತ್ ಶೆಣೈ. ಇವರು ಯೆನಪೋಯಾ ದಂತವೈದ್ಯಕೀಯ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಅನಂತರದವರು ಈಗ ವೆಸ್ಟ್‌ಇಂಡೀಸ್‌ನಲ್ಲಿ ಕ್ಯಾನ್ಸರ್ ಸ್ಪೆಷಲಿಸ್ಟ್ ಆಗಿರುವ

ಡಾ. ರಾಧಾಕಾಂತ್ ಶೆಣೈ. ಕೊನೆಯವರು ರಜನೀಕಾಂತ್ ಶೆಣೈ. ಇವರು ಸಿಂಡಿಕೇಟ್ ಬ್ಯಾಂಕ್ ಉದ್ಯೋಗಿಯಾಗಿದ್ದು, ಪ್ರಸ್ತುತ ಸ್ವಯಂ ನಿವೃತ್ತಿಯನ್ನು ಪಡೆದುಕೊಂಡಿರುತ್ತಾರೆ. ಮೇಲಿನ ವಿವರಗಳು ಕುಡ್ವಿ ವಾಸುದೇವ ಶೆಣೈ ಅವರು ವಿದ್ಯೆಗೆ ನೀಡಿದ ಮಹತ್ವ ಮತ್ತು ಮಕ್ಕಳ ಭವಿಷ್ಯದ ಬಗ್ಗೆ ಹೊಂದಿದ್ದ ಕಾಳಜಿಗಳಿಗೆ ಸಾಕ್ಷಿಗಳಾಗುತ್ತವೆ. ಈ ವಿಚಾರವನ್ನು ಅವರ ಮಕ್ಕಳು ಇಂದು ಪ್ರೀತಿಯಿಂದ ಹೀಗೆ ಸ್ಮರಿಸಿಕೊಳ್ಳುತ್ತಾರೆ. "ನಮ್ಮ ಅಕ್ಕ ಡಾಕ್ಟರ್ ಆಗಬೇಕೆಂದು ತಂದೆಯವರು ಪಟ್ಟು ಹಿಡಿದು ಅಕ್ಕನವರನ್ನು ಉತ್ತಮ ಶಾಲೆ ಮತ್ತು ಕಾಲೇಜಿಗೆ ಸೇರಿಸಿದರು. ಅಕ್ಕನವರು ವೆಲ್ಲೂರಿನಲ್ಲಿ ಮೆಡಿಕಲ್ ಕಾಲೇಜಿಗೆ ಸೇರಿ ಅವರ ಕೋರ್ಸ್ ಮುಗಿಸಿ ವಾಪಸ್ ಬರುವವರೆಗೂ ತಕ್ಷಕನಂತೆ ಅವರ ಹಾದಿ ನೋಡುತ್ತಿದ್ದರು. . . . ಅವರ ಸಾಧನೆಯಿಂದ ತಂದೆ ತುಂಬ ಅಭಿಮಾನಪಟ್ಟಿದ್ದು ನನಗಿನ್ನೂ ನೆನಪಿದೆ." (ರಜನೀಕಾಂತ್ ಶೆಣೈ; ಸಂದರ್ಶನ)

ತಂದೆಯ ಸಾಹಿತ್ಯ ಸೇವೆಯ ಪ್ರಭಾವ ಮಕ್ಕಳ ಮೇಲೂ ತಕ್ಕಮಟ್ಟಿಗೆ ಆಗಿತ್ತು. ಶ್ರೀಯುತರಾದ ಶಶಿಕಾಂತ್, ಶ್ರೀಕಾಂತ್ ಮತ್ತು ಕೃಷ್ಣಕಾಂತ್ ಶೆಣೈ ಅವರು ಶಾಲಾ ವಿದ್ಯಾರ್ಥಿಗಳಾಗಿದ್ದಾಗಲೇ **ಜ್ಞಾನೋದಯ** ಎಂಬ ಕೈಬರಹದ ಪತ್ರಿಕೆಯನ್ನು ಆರಂಭಿಸಿದ್ದರು. ಅದು ಅಂದಿನ ಚಂದಮಾಮಾ ಪತ್ರಿಕೆಯ ಮಾದರಿಯದಾಗಿದ್ದು, ವರ್ಷದಲ್ಲಿ ಇವರ ಎರಡು ಅಥವಾ ಮೂರು ಸಂಚಿಕೆಗಳನ್ನು ತರುತ್ತಿದ್ದರಂತೆ. ಮಕ್ಕಳ ಇಂತಹ ಪ್ರಯತ್ನಗಳನ್ನು ವಾಸುದೇವ ಶೆಣೈ ಅವರು ವಿಶೇಷವಾಗಿ ಪ್ರೋತ್ಸಾಹಿಸುತ್ತಿದ್ದರಂತೆ. ಅಂತಹ ಒಟ್ಟು ಹತ್ತು ಸಂಚಿಕೆಗಳನ್ನು ಹೊರತಂದ ನೆನಪುಗಳನ್ನು (ಡಾ.ಕಮಲಾಕಾಂತ್ ಶೆಣೈ ಅವರು ಸಂದರ್ಶನದ ಸಂದರ್ಭದಲ್ಲಿ ಹಂಚಿಕೊಂಡರು. ಕೃಷ್ಣಕಾಂತ್ ಶೆಣೈ ಅವರ ಕತೆಗಳು ಮಯೂರ, ಉತ್ಥಾನ, ಸುಧಾ ಮತ್ತು ತುಷಾರ ಪತ್ರಿಕೆಗಳಲ್ಲೂ, ಕಮಲಾಕಾಂತ್ ಶೆಣೈ ಅವರ ಕತೆಗಳು ತುಷಾರದಲ್ಲೂ ಎಪ್ಪತ್ತರ ದಶಕದಲ್ಲಿ ಬೆಳಕು ಕಂಡಿವೆ. ಅನಂತರದಲ್ಲಿ ಇವರುಗಳ ವೃತ್ತಿ ಬದಲಾದಂತೆ ಸಾಹಿತ್ಯ ಕೃಷಿಯತ್ತ ಆಸಕ್ತಿ ಕ್ಷೀಣವಾದಂತಿದೆ. ಕೊನೆಯವರಾದ ರಜನೀಕಾಂತ್ ಅವರೂ ಈಗ ಕವನಗಳು ಮತ್ತು ಲೇಖನಗಳನ್ನು ಬರೆಯುತ್ತ, ತಂದೆಯ ಸಾಹಿತ್ಯವನ್ನು, ಇ-ಪುಸ್ತಕಗಳನ್ನಾಗಿಸಿ ಕಾಪಾಡುವ, ಓದುಗರಿಗೆ ತಲುಪಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ವಾಸುದೇವ ಶೆಣೈ ಅವರ ಕೌಟುಂಬಿಕ ಬದುಕು ಸಾಕಷ್ಟು ತೃಪ್ತಿದಾಯಕವಾಗಿತ್ತು. ಎಲ್ಲವರಲ್ಲೂ ಅಚ್ಚುಕಟ್ಟುತನ, ಶಿಸ್ತು, ಹಿಡಿದ ಕೆಲಸವನ್ನು ಪೂರ್ಣಗೊಳಿಸುವ ಛಲ, ಒಂದಿಷ್ಟು ಮುಂಗೋಪ ಅವರ ಮುಖ್ಯ ಸ್ವಭಾವಗಳಾಗಿದ್ದವು. ಪ್ರತಿದಿನ ಬೆಳಗ್ಗೆ ಒಂಬತ್ತು ಗಂಟೆಗೆ ಅವರು ಮುದ್ರಣಾಲಯದ ಕಚೇರಿಗೆ ಹೋದರೆ ಮಧ್ಯಾಹ್ನ ಎರಡು ಗಂಟೆಗೆ ಮನೆಗೆ ಊಟಕ್ಕೆ ಹಿಂದಿರುಗುತ್ತಿದ್ದರು. ಮೂರು ಗಂಟೆಗೆ ಮತ್ತೆ ಹೋದರೆ, ರಾತ್ರಿ ಏಳು ಅಥವಾ ಎಂಟರವರೆಗೆ ಅಲ್ಲಿ ಇರುತ್ತಿದ್ದರು. ಕಚೇರಿಯ ಅಚ್ಚುಕಟ್ಟುತನವನ್ನು ಮನೆಯಲ್ಲೂ ಬಯಸುತ್ತಿದ್ದರು. ಮನೆ ನಡೆಸುವುದರ ಕುರಿತು ಯಾವ ವಸ್ತುಗಳನ್ನು ಎಲ್ಲಿ ಜೋಡಿಸಬೇಕು, ಅಡುಗೆಯಲ್ಲಿ ಎಷ್ಟು ಅಚ್ಚುಕಟ್ಟು ಇರಬೇಕು, ಮನೆಯ ಒಳ-ಹೊರಗೆ, ಮಕ್ಕಳ ಲಾಲನೆ-ಪಾಲನೆ-ಪೋಷಣೆ ಇವುಗಳನ್ನು

ಹೇಗೆ ಸಮರ್ಪಕವಾಗಿ ನಿರ್ವಹಿಸಬಹುದು ಎಂದು ರಮಾಬಾಯಿ ಅವರಿಗೆ ತಾಲೀಮು ನೀಡುತ್ತಿದ್ದರಂತೆ. ಮನೆಗೆ ಬಂದು ಹೋಗುವ ಅತಿಥಿಗಳು, ಬಂಧು-ಬಾಂಧವರ ಸಂಖ್ಯೆ ಹೇರಳವಾಗಿರುತ್ತಿದ್ದು, ಆದರಿಂದಾಗಿ ಗೃಹಿಣಿಯ ಹೊಣೆಗಾರಿಕೆ ಕುಡ್ಪಿಯವರ ಕಣ್ಣಿಂದ ತಪ್ಪಿಸಿಕೊಂಡಿರಲಿಲ್ಲ. ಅಂತೆಯೇ ಮಂಗಳೂರಿಗೆ ಪ್ರಥಮವಾಗಿ ಅಡುಗೆಗೆ ಗ್ಯಾಸ್ ಬಂದಾಗ, ತಮ್ಮ ಮನೆಗೆ ಆ ಸೌಲಭ್ಯವನ್ನು ತಕ್ಷಣ ಹಾಕಿಸಿದ್ದರಂತೆ. ರಮಾಬಾಯಿಯವರ ಹವ್ಯಾಸಗಳನ್ನೂ ಅವರು ಅಷ್ಟೇ ಗೌರವದಿಂದ ಕಾಣುತ್ತಿದ್ದರು. ಸಿನಿಮಾ ನೋಡುವ ಮಡದಿಯ ಅಭಿರುಚಿ ಅರಿತಿದ್ದ ಅವರು, ಟ್ಯಾಕ್ಸಿ ತರಿಸಿ, ಓರ್ವರನ್ನು ಮಡದಿಗೆ ಜೊತೆ ಮಾಡಿ, ಟಾಕೀಸಿನಲ್ಲಿ ಟಿಕೇಟನ್ನು ಮುಂಗಡ ಕಾದಿರಿಸುತ್ತಿದ್ದುದನ್ನು ರಮಾಬಾಯಿ ಅವರು ಸ್ಮರಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ತಡರಾತ್ರಿಯವರೆಗೆ ಎಚ್ಚರವಿರುತ್ತಿದ್ದ ಕುಡ್ಪಿ ವಾಸುದೇವ ಶೆಣೈ ಅವರು, ಆ ಅವಧಿಯಲ್ಲಿ ತಮ್ಮ ಸಾಹಿತ್ಯ ಕೃಷಿಯ ಕೆಲಸದಲ್ಲಿ ತೊಡಗುತ್ತಿದ್ದರಂತೆ. ಅಂತಹ ಸಂದರ್ಭದಲ್ಲಿ ರಮಾಬಾಯಿಯವರು ಆಗಾಗ ಚಹಾ ತಯಾರಿಸಿ ಕೊಡುವುದನ್ನು ಶ್ರದ್ಧೆಯಿಂದ ಮಾಡುತ್ತಿದ್ದರಂತೆ. ಹೀಗೆ ಪರಸ್ಪರ ಹೊಂದಿಕೊಂಡು ಒಬ್ಬರು ಇನ್ನೊಬ್ಬರ ಅವಶ್ಯಕತೆ ಮತ್ತು ಅಭಿಪ್ರಾಯಗಳನ್ನು ಅರಿತುಕೊಂಡಿದ್ದರಿಂದ ಅರ್ಥಪೂರ್ಣ ದಾಂಪತ್ಯ ಅವರದಾಗಿತ್ತು.

ತಂದೆಯವರ ನಿಷ್ಠುರವಾದಿ ನಿಲುವು ಮಕ್ಕಳಲ್ಲಿ ವಿವಿಧ ನೆನಪುಗಳನ್ನು ಬಿಟ್ಟುಹೋಗಿದೆ. ಅವುಗಳಲ್ಲಿ ಸಿಹಿ-ಕಹಿ-ಒಗರು ಎಲ್ಲವುಗಳ ಮಿಶ್ರಣವು ಸಹಜವಾಗಿಯೇ ಇದೆ. ಡಾ. ವೀಣಾ ಇಸ್ಲೂರ್ ಅವರು ತಂದೆಯ ನೆನಪುಗಳನ್ನು ಹೀಗೆ ಹಂಚಿಕೊಂಡಿದ್ದಾರೆ– "ತಂದೆಯವರು ತಮ್ಮ ತತ್ವನಿಷ್ಠೆಯಿಂದ ಕದಲಿದವರಲ್ಲ. ಒಮ್ಮೆ ಅವರ ಸ್ನೇಹಿತರೊಬ್ಬರು, ನಾನು ಮೆಡಿಕಲ್ ಕಾಲೇಜಿನ ಪ್ರವೇಶ ಕೋರಿ ಅರ್ಜಿ ಸಲ್ಲಿಸಿದ ವಿಷಯ ಕೇಳಿ, 'ನಿಮಗೆ ಹೇಗೂ ಸಿ.ಸುಬ್ರಹ್ಮಣ್ಯಂ ಅವರ (ಆಗಿನ ಮದ್ರಾಸ್ ಪ್ರಾಂತ್ಯದ ಶಿಕ್ಷಣ ಸಚಿವರು) ಪರಿಚಯವಿದೆ. ಅವರ ಪ್ರಭಾವದಿಂದ ಯಾಕೆ ಸೀಟ್ ಗಿಟ್ಟಿಸಿಕೊಳ್ಳಬಾರದು?' ಎಂದಾಗ, ನನ್ನ ತಂದೆ, 'ಅದೇನೂ ಬೇಡ, ನನ್ನ ಮಗಳಿಗೆ ಒಳ್ಳೆಯ ಅಂಕಗಳು ಬಂದಿವೆ. ಯೋಗ್ಯತೆಯ ಆಧಾರದಲ್ಲಿ ಸೀಟ್ ಸಿಕ್ಕಿದರೆ ಸರಿ, ಇಲ್ಲದಿದ್ದರೆ ಇನ್ಯಾವುದಾದರೂ ಕೋರ್ಸ್ ಇದ್ದೇ ಇದೆ. ಪ್ರಭಾವಕ್ಕಾಗಿ ಯತ್ನಿಸುವುದು ನನಗೆ ಸುತಾರಾಂ ಇಷ್ಟವಿಲ್ಲ' ಅಂದುಬಿಟ್ಟರು. ಅಂತಹ ಸ್ವಾಭಿಮಾನಿ ಅವರು. ಈ ಸ್ವಾಭಿಮಾನ ಅವರ ಕೊನೆಯ ಗಳಿಗೆಯ ತನಕ ಜಾಗೃತವಾಗಿತ್ತು. ಡಾ. ಕಮಲಾಕಾಂತ್ ಶೆಣೈ ಅವರ ನೆನಪು ಹೀಗಿವೆ – "ಅದು ನನ್ನ ಬಾಲ್ಯದ ಕಾಲ. ನಾನು ಆರನೇ ತರಗತಿಯಿಂದ ಪಿಯುಸಿವರೆಗೂ ದಿನಾ ಸಂಜೆ ತಂದೆಯ ಪ್ರೆಸ್‌ಗೆ ಹೋಗಿ, ಅಲ್ಲಿ ಕೂತಿದ್ದು, ನನ್ನಿಂದಾಗುವ ಸಹಾಯ ಮಾಡುತ್ತಿದ್ದೆ. ತಂದೆಯವರ ಜೊತೆ ಹೆಚ್ಚಿನ ಸಲಿಗೆ ಇರಲಿಲ್ಲ. ಅವರು ಹೇಳಿದ್ದನ್ನು ಚಾಚೂ ತಪ್ಪದೆ ಪಾಲಿಸುವುದಷ್ಟೇ ನನ್ನ ಕ್ರಮವಾಗಿತ್ತು. ಒಮ್ಮೆ ಅವರು ಪ್ರೆಸ್‌ನಿಂದ ಹೊರಹೋಗುತ್ತ, 'ನಾನು ಬರುವವರೆಗೆ ಎಲ್ಲೂ ಹೋಗಬೇಡ' ಎಂದಿದ್ದರು. ಸಾಮಾನ್ಯವಾಗಿ ಏಳು-ಏಳೂವರೆಗೆ ಪ್ರೆಸ್‌ಗೆ ಬೀಗ ಹಾಕುವುದು ರೂಢಿ. ಅಂದು ನಾನು ಕಾಯುತ್ತಲೇ ಇದ್ದೆ. ಗಂಟೆ ಎಂಟು, ಎಂಟೂವರೆ, ಒಂಬತ್ತು,

ಒಂಬತ್ತೂವರೆ ಹೀಗೆ ಮುಂದೋಡುತ್ತಲೇ ಇತ್ತು. ತಂದೆಯವರು ಮಾತ್ರ ಬರಲಿಲ್ಲ; 'ನಾನು ಬರುವವರೆಗೆ ಎಲ್ಲೂ ಹೋಗಬೇಡ' ಎಂಬ ಅವರ ಮಾತೇ ನನ್ನನ್ನು ಕಟ್ಟಿ ಹಾಕಿತ್ತು. ಈಗ ಬಂದಾರು, ಇನ್ನೇನು ಬಂದಾರು ಎಂಬ ನಿರೀಕ್ಷೆ ಒಂದೆಡೆ, ಬೀಗ ಹಾಕಿ ಹೋದರೆ, 'ಇರು ಎಂದು ನಾನು ಹೇಳಿರಲಿಲ್ಲವೇ' ಎಂದು ಗದರಿಯಾರು ಎಂಬ ಭಯ ಇನ್ನೊಂದೆಡೆ. ಹೀಗಾಗಿ ನಾನು ಏನು ಮಾಡಲೂ ತೋಚದೆ ಅಲ್ಲೇ ಕೂತಿದ್ದೆ. ಹತ್ತು ಗಂಟೆಗೆ ಅವರಿಂದ ಫೋನ್ ಬಂತು. 'ಅಲ್ಲೇನು ಮಾಡ್ತಿದ್ದೀ, ಬಾ' ಎಂದು ಅವರೇ ಕರೆದಾಗ ನಿರಾಳವಾಯ್ತು. ಆಗ ಈಗಿನಂತಲ್ಲ. ಎಂಟು-ಎಂಟೂವರೆಗೆ ರಸ್ತೆಗಳಲ್ಲಿ ಜನಸಂಚಾರ ಇರುತ್ತಿರಲಿಲ್ಲ. ಅಂತೂ ಹೇಗೋ ಮನೆ ಸೇರಿದ್ದಾಯ್ತು" ಎಂದು ನೆನಪಿಸಿಕೊಳ್ಳುತ್ತ ನಗು ತಂದುಕೊಂಡರು.

ರಜನೀಕಾಂತ್ ಅವರು ತಂದೆಯ ಹಾಸ್ಯಪ್ರಜ್ಞೆಯನ್ನು ಹೀಗೆ ನೆನಪಿಸಿಕೊಳ್ಳುತ್ತಾರೆ, "ತಂದೆಯವರು ಅಂಗವಿಕಲ 'ಹಾಮಯ್ಯ' ಎಂಬ ವ್ಯಕ್ತಿಯನ್ನು ಕಂಡು ಕನಿಕರಪಟ್ಟು ಕೆಲಸವೊಂದನ್ನು ಹೇಳಿದರು. ಒಂದು ಕೈ ಮೊಂಡಾಗಿದ್ದ ಆತ, ಇಡೀ ದಿನ ಕಳೆದರೂ ಆ ಕೆಲಸ ಪೂರ್ತಿಗೊಳಿಸಲಾಗದೆ ಚಡಪಡಿಸುತ್ತಿದ್ದ. ಕೊನೆಗೆ ತಂದೆಯವರು ನನ್ನನ್ನು ಆತನ ಸಹಾಯಕ್ಕೆ ಕಳಿಸಿದರು. ಅರ್ಧ ಗಂಟೆಯಲ್ಲಿ ಆ ಕೆಲಸ ಮುಗಿಸಿದೆ. ಆಗ ತಂದೆ ಹೊರಗೆ ಬಂದು ಆತನನ್ನು ಕರೆದು, "ಹೌದಾ, ನೀನು ಅರ್ಧ ಗಂಟೆ ಕಡಿಮೆ ಕೆಲಸ ಮಾಡಿದೆಯಂತೆ. ನಿನಗೆ ಅರ್ಧಗಂಟೆಯ ಸಂಬಳ ಕಟ್!" ಎಂದು ಹೇಳಿ ಆತನಿಗೆ ಕೈತುಂಬಾ ಸಂಬಳವಿತ್ತದ್ದು ಮಾತ್ರವಲ್ಲ, 'ಇನ್ನು ಮುಂದೆ ಏನಾದರೂ ಕೆಲಸವಿದ್ದರೆ ಬಂದು ಮಾಡಬೇಕು ಅಯ್ತಾ' ಎಂದು ಕಳಿಸಿಕೊಟ್ಟರು." ವೀಣಾ ಇಸ್ಲೂರ್ ಅವರು ತಂದೆಯ ಕುರಿತು ಬರೆದ ಪತ್ರದಲ್ಲಿ "ಅವರು ಎಷ್ಟು ನಿಷ್ಠುರವಾದಿಯೋ ಅಷ್ಟೇ ಮೃದು ಹೃದಯದವರು. ಮಕ್ಕಳೆಂದರೆ ಅವರಿಗೆ ಅಪಾರ ಪ್ರೀತಿ. ನಮ್ಮ ಒಳಿತಿಗಾಗಿ ತಾನು ಎಷ್ಟು ಬೇಕಾದರೂ ಕಷ್ಟಪಡಲು ಸಿದ್ಧರಿದ್ದರು. ಸ್ನೇಹಿತರೆಂದರೂ ಅವರಿಗೆ ಬಹಳ ಪ್ರೀತಿ, ವಿಶ್ವಾಸ. ಅವರ ಉಡುಪಿಯ ಸ್ನೇಹಿತರೊಬ್ಬರು ವ್ಯಾಪಾರದಲ್ಲಿ ಆರ್ಥಿಕವಾಗಿ ದಿವಾಳಿಯಾದಾಗ ಅವರನ್ನು ನಮ್ಮ ಮನೆಗೆ ಕರೆತಂದು ಸಂತೈಸಿ, ನಮ್ಮಲ್ಲೇ ಕೆಲವು ತಿಂಗಳು ಇರಿಸಿಕೊಂಡು ಸಾಧ್ಯವಾದಾಗಲೆಲ್ಲ, ಅವರ ಕುಟುಂಬಕ್ಕೂ ತನ್ನಿಂದಾದ ಅಲ್ಪಸಹಾಯ ಮಾಡುತ್ತಿದ್ದ ಉದಾರ ಹೃದಯಿಗಳು ಅವರು." ಎಂದು ನೆನಪಿಸಿಕೊಳ್ಳುತ್ತಾರೆ. ಸ್ವಲ್ಪ ಮುಂಗೋಪಿಯಾದರೂ ತಂದೆ ಹೊಂದಿದ್ದ ಸಮಯಪ್ರಜ್ಞೆ, ಅಸಹಾಯಕರ ಕುರಿತು ಹೊಂದಿದ್ದ ಕನಿಕರ, ಅಂಥವರಿಗೆ ಚಾಚುತ್ತಿದ್ದ ಸಹಾಯಹಸ್ತ, ಮಕ್ಕಳಿಗೆ ಆದರ್ಶದ ಪಾಠವನ್ನು ಉಣಬಡಿಸಿದೆ.

## ಸಾಮಾಜಿಕ/ರಾಜಕೀಯ ಬದುಕು

ಕುಡ್ವಿ ವಾಸುದೇವ ಶೆಣೈ ಅವರು ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ತಮ್ಮ ಮಿತಿಯಲ್ಲಿ ಚಳುವಳಿಯಲ್ಲಿ ಪಾಲ್ಗೊಂಡವರು. ಅವರು ಕಾಂಗ್ರೆಸ್‌ನ ಸದಸ್ಯರಾಗಿದ್ದು, ಸ್ವಾತಂತ್ರ್ಯ ಹೋರಾಟಕ್ಕೆ ಜನರನ್ನು ಒಗ್ಗೂಡಿಸುವ ಕಾರ್ಯವನ್ನು ಮಂಗಳೂರು ಪ್ರಾಂತ್ಯದಲ್ಲಿ ಮಾಡಿದವರಲ್ಲಿ ಒಬ್ಬರಾಗಿದ್ದರು. ಅಂತಹ ಒಂದು ಘಟನೆಯ ಕುರಿತು ವೀಣಾ ಇಸ್ಲೂರ್ ಅವರು ಹೀಗೆ

ಬರೆಯುತ್ತಾರೆ –"ಒಮ್ಮೆ ಚಿಕ್ಕ ಮಕ್ಕಳೊಂದಿಗೆ ನಮ್ಮ ತಾಯಿಯವರೊಬ್ಬರೇ ಇದ್ದ ಸಂದರ್ಭದಲ್ಲಿ ಪೊಲೀಸ್ ಪಡೆ ಬಾಗಿಲು ತೆರೆಯುವಂತೆ ಒತ್ತಾಯಿಸಿದಾಗ, ತಾಯಿಯವರ ಜಂಘಾಬಲವೇ ಉಡುಗಿ ಹೋಯಿತು. ಪತಿ ಬಂದ ಹೊರತು ಬಾಗಿಲು ತೆರೆಯುವುದಿಲ್ಲವೆಂದು ಹೇಳಿ ಪೊಲೀಸರನ್ನು ಹೊರಗೆ ವರಾಂಡಾದಲ್ಲಿಯೇ ಕೂರಿಸಿದರು. ತಾವು ಮನೆಯಲ್ಲಿ ಕೈಗೆ ಸಿಕ್ಕ ಕರಪತ್ರಗಳನ್ನೆಲ್ಲ ಒಟ್ಟುಗೂಡಿಸಿ ಹಿಂಬಾಗಿಲಿನಿಂದ ಒಯ್ದು, ನೀರೊಲೆಗೆ ಹಾಕಿ ಸುಟ್ಟುಬಿಟ್ಟರು. ಸ್ವಲ್ಪ ಹೊತ್ತಿನಲ್ಲಿಯೇ ನಮ್ಮ ತಂದೆಯವರು ಮನೆಗೆ ಬಂದಾಗ ಪೊಲೀಸ್ ಪಡೆಯನ್ನು ನೋಡಿ ಸ್ವಲ್ಪವೂ ವಿಚಲಿತರಾಗದೆ ಮನೆಯನ್ನೆಲ್ಲಾ ಶೋಧಿಸುವಲ್ಲಿ ಅವರಿಗೆ ನೆರವಾದರು. ಅಖಂಡ ರಾಷ್ಟ್ರಪ್ರೇಮದ ಎದುರು ಹೆಂಡತಿ–ಮಕ್ಕಳ ಯೋಗಕ್ಷೇಮವು ಅವರಿಗೆ ಗೌಣವಾಗಿತ್ತು. ನಮ್ಮ ತಾಯಿಯವರ ಸಕಾಲಿಕ ಯೋಜನೆಯಿಂದ ಅವರು ತೂಗುಕತ್ತಿಯ ಅಲಗಿನಿಂದ ಆ ದಿನ ತಪ್ಪಿಸಿಕೊಂಡಿದ್ದರು. ಇದು ಅವರು ಕಾಂಗ್ರೆಸ್ ಕಾರ್ಯಕರ್ತರಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದಾಗ ನಡೆದ ಘಟನೆ (**ನನ್ನ ತಂದೆ–ಕುಡ್ಪಿ ವಾಸುದೇವ ಶೆಣೈ**– ಡಾ.ವೀಣಾ ಇಸ್ಲೂರ್, ಉದಯವಾಣಿ, ೩೦.೦೮.೨೦೦೭). ಆದರೆ ಮುಂದೆ ೧೯೭೫ ರಲ್ಲಿ ಇಂದಿರಾಗಾಂಧಿ ತುರ್ತು ಪರಿಸ್ಥಿತಿ ಘೋಷಣೆ ಮಾಡಿ ಪತ್ರಕರ್ತರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದುಕೊಂಡಾಗ, ಅವರ ಮನಸ್ಸಿಗೆ ಅತೀವ ನೋವಾಯಿತು. ಮುಂದೆ ಎಂದೂ ಅವರು ರಾಜಕೀಯದತ್ತ ಸುಳಿಯಲಿಲ್ಲ. ಅಂದು ಉಗ್ರಗಾಮಿ ಸ್ವಾತಂತ್ರ್ಯ ಹೋರಾಟದ ಮುಂದಾಳತ್ವ ವಹಿಸಿದ್ದ ಸುಭಾಷ್‌ಚಂದ್ರ ಬೋಸ್ ಅವರನ್ನು ಕುಡ್ಪಿಯವರು ಮುಖತಃ ಭೇಟಿಯಾಗಿದ್ದರು. ಕೇರಳದ ಮಾಜಿ ಮುಖ್ಯಮಂತ್ರಿ ಶ್ರೀ ನಂಬೂದರಿಪ್ಪಾಡ್, ಪ್ರಗತಿಶೀಲ ಚಳುವಳಿಯ ಧುರೀಣ ಶ್ರೀ ಅನಕೃ, ಡಾ.ಶಿವರಾಮ ಕಾರಂತ ಮುಂತಾದವರು ತಮ್ಮ ಮನೆಗೆ ಬಂದುದನ್ನು ಅವರ ಮಕ್ಕಳು ನೆನಪಿಸಿಕೊಳ್ಳುತ್ತಾರೆ. ಶ್ರೀ ಬಿ.ವಿ.ಬಾಳಿಗಾ, ಉದ್ಯಮಿ ಶ್ರೀ ಮಣೇಲು ಕೃಷ್ಣ ನಾಯಕ್, ಭಾಲ್ಕೋ ಸ್ಟುಡಿಯೋದ ಮಾಲಕ ಶ್ರೀ ಬಾಲಗೋಪಾಲ, ಶ್ರೀ ರಾಜಾರಾಮ್ ಮಲ್ಯ ಮುಂತಾದವರು ವಾಸುದೇವ ಶೆಣೈ ಅವರ ಆಪ್ತಮಿತ್ರರಾಗಿದ್ದು, ಪ್ರತಿವಾರವೂ ಇವರ ಮನೆಯಲ್ಲಿ ಅವರೆಲ್ಲ ಸೇರುತ್ತಿದ್ದರಂತೆ.

## ಪತ್ರಿಕೋದ್ಯಮಿಯಾಗಿ

'ಪ್ರಭಾತ' ಪತ್ರಿಕೆಯು ವಾಸುದೇವ ಶೆಣೈ ಅವರ ಕನಸಿನ ಕೂಸು. ೧೯೩೫ ರಲ್ಲಿ ಮಂಗಳೂರಿನ ಬಾಲಾಜಿ ಚಿತ್ರಮಂದಿರದ ಎದುರುಗಡೆ ಮಹಡಿಯಲ್ಲಿ 'ಪ್ರಭಾತ' ಪತ್ರಿಕೆಯ ಆಫೀಸನ್ನು ಆರಂಭಿಸಿದರು. ಅಶ್ಲೀಲತೆ, ಹೀತ ಪತ್ರಿಕೋದ್ಯಮಗಳ ವಿರೋಧಿಯಾಗಿದ್ದ ಅವರು ತಮ್ಮ ಜೀವನದ ಕೊನೆಯತನಕವೂ ಪತ್ರಿಕೆಯ ಗುಣಮಟ್ಟವನ್ನು ಕಾಪಾಡಿಕೊಂಡು ಬಂದಿದ್ದರು. ಪತ್ರಿಕೆಯನ್ನು ಆರಂಭಿಸಿ ಕೈಸುಟ್ಟುಕೊಂಡವರ ಹಲವು ಅನುಭವಗಳು ಪ್ರಚಲಿತವಿರುವ ದಿನಗಳಲ್ಲೂ ತುಂಬ ಜಾಣ್ಮೆ ಮತ್ತು ವ್ಯವಹಾರಪ್ರಜ್ಞೆಯಿಂದ ಇವರು ಪತ್ರಿಕೆಯನ್ನು ನಡೆಸಿಕೊಂಡು ಬಂದಿರುವುದು ಕಂಡುಬರುತ್ತದೆ. 'ಯಾವುದೇ ಪತ್ರಿಕೋದ್ಯಮವು ಜನರ ಭಾವನೆಗಳಿಗೆ ಸ್ಪಂದಿಸಿ ಮುಂದುವರಿದರೆ,

ಅದು ಆರ್ಥಿಕವಾಗಿ ಮಾತ್ರವಲ್ಲ, ಸಾಮಾಜಿಕವಾಗಿಯೂ ಸಾರ್ಥಕತೆಯನ್ನು ಕಂಡುಕೊಳ್ಳುವುದು' ಎಂಬುದು ಅವರ ನಂಬಿಕೆಯಾಗಿತ್ತು. ಪತ್ರಿಕೆ ಆರಂಭಿಸುವಾಗ ಇತರರಂತೆ ಸಾಲ ಮಾಡುವುದು ವಾಸುದೇವ ಶೆಣೈ ಅವರಿಗೂ ಅನಿವಾರ್ಯವಾಗಿತ್ತು. ವರ್ಷದಲ್ಲಿ ಎರಡು ಇಲ್ಲವೆ ಮೂರು ಬಾರಿ ಪ್ರಭಾತದ ವಿಶೇಷ ಸಂಚಿಕೆಗಳನ್ನು ಅವರು ತರುತ್ತಿದ್ದರು. ಅದಕ್ಕಾಗಿ ಜಾಹೀರಾತು ಸಂಗ್ರಹಿಸಲು ಅವರು ಮುಂಬೈಗೆ ತೆರಳಿ ತಿಂಗಳುಗಟ್ಟಲೆ ಕೆಲಸ ಮಾಡುತ್ತಿದ್ದರು. ಪತ್ರಿಕೆಗಳಲ್ಲಿ ಸಿನಿಮಾ ಜಗತ್ತಿನ ಚಿತ್ರಕಥೆಗಳು, ಹಾಸ್ಯ ಲೇಖನಗಳು, ನಟ/ನಟಿಯರ ಬದುಕಿನ ಕುರಿತ ಲೇಖನಗಳನ್ನು ಪ್ರಕಟಿಸುತ್ತಿದ್ದರು. ಇವುಗಳೊಂದಿಗೆ ಪ್ರಕಟವಾಗುತ್ತಿದ್ದ ಹಾಸ್ಯ ಲೇಖನ, ಪ್ರವಾಸ ಕಥನ ಹಾಗೂ ವೈದ್ಯಕೀಯ ಲೇಖನಗಳಿಂದಾಗಿ 'ಪ್ರಭಾತ'ವು ಮೂವತ್ತರ ದಶಕದಿಂದ ಅರವತ್ತರ ದಶಕದವರೆಗೆ ದಕ್ಷಿಣಕನ್ನಡಿಗರ ಮನೆಮಾತಾಗಿತ್ತು. ಇಂಥ ಜನಮನ್ನಣೆಯಿಂದ ಹಾಗೂ ಮುಂಬೈನಲ್ಲಿ ಸಂಗ್ರಹಿಸುತ್ತಿದ್ದ ಜಾಹೀರಾತುಗಳಿಂದ ಪ್ರಭಾತದ ವರ್ಷದ ಸಂಚಿಕೆಗಳ ಖರ್ಚು ಕಳೆದುಹೋಗುತ್ತಿತ್ತಂತೆ. ತಮ್ಮದೇ ಮುದ್ರಣಾಲಯ ಸ್ಥಾಪಿಸಿದ ಬಳಿಕ ಅವರ ಆರ್ಥಿಕ ಸ್ಥಿತಿ ಸುಧಾರಿಸಿದ್ದನ್ನೂ ಮಕ್ಕಳು ನೆನಪಿಸಿಕೊಳ್ಳುತ್ತಾರೆ. ಹಾಗೆಯೇ ತಂದೆ ಮುಂಬೈಯಿಂದ ಹಿಂದಿರುಗುವುದನ್ನು ಮಕ್ಕಳು ಸಂಭ್ರಮದಿಂದ ಕಾಯುತ್ತಿದ್ದುದನ್ನೂ ನೆನಪಿಸಿಕೊಳ್ಳುತ್ತಾರೆ. ಅದಕ್ಕೆ ತಂದೆ ಬರುವಾಗ ತರುತ್ತಿದ್ದ ಡಬ್ಬಿಗಟ್ಟಲೆ ಪಾರ್ಲೆ ಗ್ಲೂಕೋ ಬಿಸ್ಕಿಟ್, ಪೆಪ್ಪರ್‌ಮಿಠಾಯಿ, ಪೆನ್ಸಿಲ್, ರಬ್ಬರ್, ಆಟಿಕೆಗಳು ಕಾರಣವಾಗಿದ್ದವು. ಅವೆಲ್ಲವನ್ನೂ ತನ್ನ ಮಕ್ಕಳೊಂದಿಗೆ ನೆರೆಕರೆಯ ಮಕ್ಕಳಿಗೂ ಹಂಚಿ ವಾಸುದೇವ ಶೆಣೈ ಸಂತುಷ್ಟರಾಗುತ್ತಿದ್ದರು.

೧೯೫೪ ರಲ್ಲಿ ಕುಡ್ವಿಯವರು ಇನ್ನೊಂದು ಮಹತ್ವದ ಹೆಜ್ಜೆಯನ್ನು ಇರಿಸಿದರು. ಅದೇ '**ಒಂದಾಣೆ ಮಾಲೆ**' ಎಂಬ ಕಿರು ಪುಸ್ತಿಕೆಗಳ ಪ್ರಕಟಣೆಯ ಕಾರ್ಯ. ಇವು ಸುಮಾರು ೨೦–೨೫ ಪುಟಗಳ ವ್ಯಾಪ್ತಿಯ ಪುಸ್ತಕಗಳು. ಕೆಲವು ಹದಿನೈದು ಪುಟಕ್ಕೇ ಸೀಮಿತವಾಗಿದ್ದರೆ, ಇನ್ನು ಕೆಲವು ಮೂವತ್ತೆರಡು ಪುಟಗಳಷ್ಟು ದೀರ್ಘವಾದದ್ದೂ ಇದೆ. ೧೯೫೪ ರಿಂದ ೧೯೬೨ ರ ಅವಧಿಯಲ್ಲಿ ಪ್ರಕಟವಾದ ಈ ಮಾಲಿಕೆಯಲ್ಲಿ ಒಟ್ಟು ೩೪೮ ಕಿರು ಪುಸ್ತಕಗಳು ಸೇರಿವೆ.* **ಕೆಪ್ಪಟೆರಾಯ ಮತ್ತು ಇತರ ವಿನೋದ ಕತೆಗಳು** ಎಂಬುದು ಈ ಮಾಲಿಕೆಯ ಮೊದಲ ಪುಸ್ತಿಕೆಯಾಗಿದೆ. **ಕಳ್ಳನಿಗೆ ಸಂಭಾವನೆ ಮತ್ತು ಇತರ ಕತೆಗಳು**, ಸದ್ರಿ ಸುಬ್ಬ (ಪ್ರಹಸನ), **ಅರ್ಥಕೋಶ**, ವಿನೋದ ವಿಹಾರ, **ಟಿಶ್ಯೂ ಔಷಧಿಗಳ ಕೈಪಿಡಿ**, **ಜೀವನ ಮೌಲ್ಯ**, **ಶ್ರೀ ಕ್ಷೇತ್ರ ಧರ್ಮಸ್ಥಳ** ಮೊದಲಾದ ಪುಸ್ತಕಗಳಲ್ಲಿ ಸುಮಾರು ನೂರು ಪುಸ್ತಕಗಳು ಏಕಾಂಕ ನಾಟಕಗಳಾಗಿವೆ. ಇವುಗಳಲ್ಲಿ ಪೌರಾಣಿಕ ನಾಟಕ, ಗೀತನಾಟಕ, ಸಾಮಾಜಿಕ ನಾಟಕ, ಮಕ್ಕಳ ನಾಟಕ ಎಲ್ಲವೂ ಸೇರಿಕೊಂಡಿವೆ. ೨೦ ಪುಸ್ತಕಗಳು ಯಕ್ಷಗಾನಕ್ಕೆ, ೨೦ ಪುಸ್ತಕಗಳು ಕವಿತೆಗಳಿಗೆ ಸಂಬಂಧಿಸಿವೆ. ಮತ್ತು ೪೫ ರಷ್ಟು ಕತೆ/ಕಥಾಸಂಕಲನಗಳು ಈ ಮಾಲಿಕೆಯಲ್ಲಿ ಪ್ರಕಟವಾಗಿವೆ.

---

*ಟಿ.ಚಂದ್ರರಾಜ ಸೆಟ್ಟಿ ಸಿದ್ಧಕಟ್ಟೆ ಅವರು ಸಂಗ್ರಹಿಸಿರುವ 'ಕನ್ನಡ ಬರಹಗಾರರ ಬಳಗ' ಸಂಪುಟದಲ್ಲಿ ಒಂದಾಣೆ ಮಾಲೆಯ ೩೪೨ ಪುಸ್ತಕಗಳು ಪ್ರಕಟವಾಗಿವೆ ಎಂದು ಸೂಚಿಸಲಾಗಿದೆ.

ಇವುಗಳಲ್ಲದೆ ಪ್ರವಾಸಕಥನ, ಸ್ಥಳಪುರಾಣ/ಕ್ಷೇತ್ರಪರಿಚಯ, ಅನುವಾದ ಸಾಹಿತ್ಯ, ಜಾನಪದ ಸಾಹಿತ್ಯ, ವಿಮರ್ಶೆ, ಜೀವನಚರಿತ್ರೆ, ತತ್ವಜ್ಞಾನ, ಜ್ಯೋತಿಷ್ಯ, ಗಾದೆಗಳು, ಒಗಟುಗಳು, ನಗೆಹನಿಗಳು, ಗೃಹವೈದ್ಯ, ಪ್ರಥಮ ಚಿಕಿತ್ಸೆ–ಹೀಗೆ ವೈವಿಧ್ಯಮಯ ವಿಷಯಗಳಿಗೆ ಸಂಬಂಧಿಸಿದ ಸಾಹಿತ್ಯ ಈ ಮಾಲಿಕೆಯಲ್ಲಿ ಸೇರಿಕೊಂಡಿದೆ.

ಐವತ್ತು–ಅರವತ್ತರ ದಶಕದ ಹಿರಿಯ ಮತ್ತು ಕಿರಿಯ ಲೇಖಕರೆಲ್ಲರೂ ಈ ಮಾಲಿಕೆಗಾಗಿ ಕೆಲಸಮಾಡಿದ್ದಾರೆ. ಬಹುಶಃ ಕುಡ್ವಿಯವರ ಉದ್ದೇಶವನ್ನು ಸರಿಯಾಗಿ ಗ್ರಹಿಸಿದ ಅಂದಿನ ಹಿರಿಯ ವಿದ್ವಾಂಸರೂ ಈ ಮಾಲೆಗೆ ಬರೆದುಕೊಡುವ ಮೂಲಕ ಕೈಜೋಡಿಸಿದ್ದಾರೆ. ನಿದರ್ಶನಕ್ಕೆ ಕುಡ್ವಿಯವರ ಗುರುಗಳಾದ ಎಂ.ಎಸ್.ಕಾಮತ್‌ರವರ ನಾಟಕಗಳು ಮತ್ತು ಕತೆಗಳು ಈ ಮಾಲಿಕೆಯಲ್ಲಿ ಬಂದಿವೆ. ಅಲ್ಲದೆ, ಎಂ.ಗೋವಿಂದ ಪೈ, ಬಿ.ಶಂಕರ ಭಟ್, ಬಳ್ಳಕುರು ಸುಬ್ರಾಯ ಅಡಿಗ, ಅಮ್ಮೆಂಬಳ ಅನಂತಯ್ಯ ನಾವಡ, ನವಗಿರಿನಂದ, ಅಂಬಾತನಯ ಮುದ್ರಾಡಿ, ರಸಿಕ ಪುತ್ತಿಗೆ, ಬಿ.ಪದ್ಮನಾಭ ಸೋಮಯಾಜಿ, 'ವಿಚಿತ್ರ' ಏತಡ್ಕ, ಡಾ.ಎಸ್.ಪಿ.ಭಟ್, ಎಸ್.ಎಲ್. ನಾಯಕ್, ಟಿ. ಚಂದ್ರರಾಜ ಸೆಟ್ಟಿ ಸಿದ್ಧಕಟ್ಟೆ, ಎಸ್.ಎಲ್.ಶರ್ಮ ಕಾಸರಗೋಡು, ಪಡಾರು ಮಹಾಬಲೇಶ್ವರ ಭಟ್ಟ, ಕೆ.ಎನ್.ಭಟ್ ಶಿರಾಡಿಪಾಲ್ ಹೀಗೆ ಹಲವರ ವೈವಿಧ್ಯಮಯ ಪ್ರಕಾರದ ಕೃತಿಗಳು ಈ ಮಾಲಿಕೆಯಲ್ಲಿ ಪ್ರಕಟವಾಗಿವೆ. ಅವರ ಹಿರಿಯ ಪುತ್ರ ದಿವಂಗತ

ಕುಡ್ವ ಚಂದ್ರಕಾಂತ ಶೆಣೈ ಬರೆದ ನಾಟಕವೂ ಈ ಮಾಲಿಕೆಯಲ್ಲಿ ಪ್ರಕಟವಾಗಿದೆ. ಪ್ರತಿವಾರವೂ ಒಂದೊಂದು ಪುಸ್ತಕದಂತೆ ಪ್ರಕಟವಾಗುತ್ತಿದ್ದ ಒಂದಾಣೆಮಾಲೆಯ ಈ ಕಿರುಪುಸ್ತಕಗಳು ಅಂದು ತುಂಬ ಜನಪ್ರಿಯವಾಗಿದ್ದವು. 'ಸಾಹಿತ್ಯಲೋಕದ ಇತಿಹಾಸದಲ್ಲಿಯೇ ಇದೊಂದು ಅದ್ಭುತ ಸಾಹಸ'ವೆಂದು ಹಲವರು ಕುಡ್ವಿಯವರ ಕಾರ್ಯವನ್ನು ಶ್ಲಾಘಿಸಿದ್ದಾರೆ. * ಇನ್ನೊಂದೆಡೆ ದಕ್ಷಿಣಕನ್ನಡದ ಆಸುಪಾಸಿನ ಹಲವು ಬರಹಗಾರರನ್ನು ನಿರ್ಮಾಣ ಮಾಡುವಲ್ಲಿ ಕುಡ್ವಿಯವರು ವಹಿಸಿದ ಪಾತ್ರ ಗುರುತರವಾದದ್ದು. ಆರಂಭದಲ್ಲಿ ಹೇಳಿದಂತೆ ಈ ಮಾಲಿಕೆಯು ಓದುವ ವರ್ಗವೊಂದನ್ನು ನಿರ್ಮಿಸಿತು ಮಾತ್ರವಲ್ಲ, ಸಾಹಿತ್ಯವನ್ನು ಜನರ ಬಳಿಗೆ ಒಯ್ದಿತು.

## ರಂಗಭೂಮಿ

ಕುಡ್ವಿಯವರ ರಚನೆಗಳಲ್ಲಿ ನಾಟಕ ಕೃತಿಗಳು ಇರುವಂತೆಯೇ, ನಾಟಕಗಳನ್ನು ರಂಗದ ಮೇಲೆ ಪ್ರಯೋಗಿಸುವುದಕ್ಕೆ ಅವರು ಶ್ರಮಿಸುತ್ತಿದ್ದ ಬಗೆ ಕೂಡ ಉಲ್ಲೇಖನೀಯವಾಗಿದೆ. ಅಂದು **'ಕಲಾಭವನ'** ಎಂಬ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಯೋಜಿಸುವ ಸಂಸ್ಥೆಯೊಂದನ್ನು

---

*ಕುಡ್ವಿಯವರ ಕಾಲಾನಂತರ ಪ್ರಭಾತ ಪತ್ರಿಕೆಯ ಸಂಚಿಕೆಗಳು ಮತ್ತು ಒಂದಾಣೆಮಾಲೆಯ ಪುಸ್ತಿಕೆಗಳನ್ನು ನೋಡಿಕೊಳ್ಳಲು ಸಾಧ್ಯವಾಗದೆ, ಕುಟುಂಬ ಸ್ನೇಹಿತರಾದ ಶ್ರೀ ವೆಂಕಟೇಶ ಪೈ ಅವರಿಗೆ ವಹಿಸಲಾಗಿತ್ತು. ಅವರ ಕಾಲಾನಂತರ ಈಗ ಇಂದು ಉಪಲಬ್ಧವಿರುವ ಕುಡ್ವಿಯವರ ಕೃತಿಗಳೂ ಒಂದೆಡೆ ಸಿಗದಂತಾಗಿದೆ. ಶ್ರೀ ರಜನೀಕಾಂತ್ ಶೆಣೈ ಅವರ ಬಳಿ ಮಾತ್ರ ಕುಡ್ವಿಯವರ ಕೆಲವು ಕೃತಿಗಳು ದೊರೆಯುತ್ತವೆ.

ಸಮಾನಮನಸ್ಕರು ಹುಟ್ಟುಹಾಕಿದ್ದರು. ಕುಡ್ಪಿಯವರು ಈ 'ಕಲಾಭವನ'ದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರು. ವರ್ಷದ ಕೆಲವು ತಿಂಗಳುಗಳಲ್ಲಿ ವಿಶೇಷವಾಗಿ ಜನವರಿ ಮತ್ತು ಫೆಬ್ರವರಿ ತಿಂಗಳಲ್ಲಿ ಸಂಸ್ಥೆಯು ಕಾರ್ಯಶೀಲವಾಗಿದ್ದು, ನಿರಂತರ ರಂಗತರಬೇತಿ, ರಂಗಪ್ರದರ್ಶನ ಕಾರ್ಯಕ್ರಮಗಳನ್ನು ಆಯೋಜಿಸುತ್ತಿತ್ತು. ಸ್ನೇಹಿತರೇ ನಟರೂ ಆಗಿದ್ದು, ಅವರದು ಹವ್ಯಾಸಿ ಕಲಾತಂಡವಾಗಿತ್ತು. ಕುಡ್ಪಿಯವರು ನಿರ್ದೇಶಿಸುತ್ತಿದ್ದ ನಾಟಕಗಳಲ್ಲಿ ಅವರ ಸ್ನೇಹಿತರಾಗಿದ್ದ ಬಿ.ವಿ.ಬಾಳಿಗಾ, ಉದ್ಯಮಿಯಾಗಿದ್ದ ಶ್ರೀ ಮಣೇಲ್ ಕೃಷ್ಣ ನಾಯಕ್, ಭಾಲ್ಕೋ ಸ್ಟುಡಿಯೋದ ಅಂದಿನ ಮಾಲಕರಾಗಿದ್ದ ಶ್ರೀ ಬಾಲಗೋಪಾಲ ಮುಂತಾದವರು ಪಾತ್ರಧಾರಿಗಳಾಗಿದ್ದರು. ಎಲ್ಲದರಲ್ಲೂ ನಿಖರತೆಯನ್ನು ಬಯಸುತ್ತಿದ್ದ ಕುಡ್ಪಿಯವರು ನಾಟಕದ ಸಂಭಾಷಣೆಗಳನ್ನು ನಟರಿಂದ ಪುನರಾವರ್ತನೆ ಮಾಡಿಸುತ್ತಿದ್ದ ರೀತಿ, ಅವರನ್ನು ತಿದ್ದಿ, ತೀಡುತ್ತಿದ್ದ ಬಗೆ ವಿಶಿಷ್ಟವಾಗಿತ್ತು. ಈ ಹವ್ಯಾಸಿ ಕಲಾವಿದರ ತಂಡವು ತಾಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ನಡೆಯುತ್ತಿದ್ದ ಹಲವು ನಾಟಕಸ್ಪರ್ಧೆಗಳಲ್ಲಿ ಪಾಲ್ಗೊಂಡಿತ್ತು ಎಂದು ಸಂದರ್ಶನದ ಸಂದರ್ಭದಲ್ಲಿ ತಿಳಿದುಬಂದಿದೆ.

೧೯೬೦ರಲ್ಲಿ ಮಣಿಪಾಲದಲ್ಲಿ ಜರುಗಿದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕುಡ್ಪಿಯವರ **ಸನ್ಯಾಸಿಯ ಗೊಂಗಡಿ** ನಾಟಕವು ಪ್ರದರ್ಶನಗೊಂಡಿತ್ತು. ಪ್ರಥಮ ದೃಶ್ಯದಲ್ಲಿ ಸನ್ಯಾಸಿಯು ತನ್ನ ಹಿಂಬಾಲಕರೊಂದಿಗೊಡಗೂಡಿ ಜೈ ಜೈಕಾರದೊಂದಿಗೆ ಸಭೆಯ ಮೂಲಕ ಪ್ರವೇಶಿಸಿದಾಗ, ಯಾರೋ ನೈಜ ಸ್ವಾಮೀಜಿ ಬಂದರೆಂದು ಭಾವಿಸಿದ ಇಡೀ ಸಭೆ ಎದ್ದು ನಿಂತು ನಮಸ್ಕಾರ ಮಾಡಿತಂತೆ. ಅನಂತರ ಇದು ನಾಟಕದ ಪ್ರಥಮ ದೃಶ್ಯವೆಂದು ತಿಳಿದಾಗ ತಾವು ಬೇಸ್ತು ಬಿದ್ದುದನ್ನು ಜನರು ಅರಿತರಂತೆ. ನಾಟಕ ಪ್ರಯೋಗದಲ್ಲಿ ವೈವಿಧ್ಯತೆಯನ್ನು ತರುವ ನಿಟ್ಟಿನಲ್ಲಿ ಕುಡ್ಪಿಯವರ ಚತುರತೆಯನ್ನು ಇದು ಸೂಚಿಸುತ್ತದೆ.

## ಸಾಹಿತ್ಯ ಕೃಷಿ

ಕುಡ್ಪಿ ವಾಸುದೇವ ಶೆಣೈಯವರು ಪತ್ರಕರ್ತರಾಗಿ ವೃತ್ತಿಬದುಕನ್ನು ಆರಂಭಿಸಿದವರು. ಅದರ ಒಂದು ಭಾಗವಾಗಿಯೋ ಎಂಬಂತೆ ಸಾಹಿತ್ಯಕೃಷಿ ಅವರಿಂದ ಹುಲುಸಾಗಿ ಬೆಳೆಯಿತು. ಇದುವರೆಗೆ ದೊರೆತ ಮಾಹಿತಿಗಳ ಪ್ರಕಾರ **ಜೀವನದ ಸೊಗಸು** (೧೯೩೩) ಎಂಬುದು ಅವರ ಮೊದಲ ಕೃತಿ. ಅನಂತರ ಒಟ್ಟು **ಒಂಬತ್ತು ಕಥಾಸಂಕಲನಗಳನ್ನು** ಅವರು ಹೊರತಂದಿದ್ದಾರೆ. ಇವುಗಳಲ್ಲಿ ನೀತಿ ಕತೆಗಳು, ವಿನೋದ ಕತೆಗಳು, ಹರಟೆಯ ಮಾದರಿಯ ಕತೆಗಳು ಮತ್ತು ಪ್ರಬುದ್ಧ ಕತೆಗಳು ಎಲ್ಲವೂ ಸೇರ್ಪಡೆಗೊಂಡಿವೆ. ಕಥಾರಚನೆಯ ಜೊತೆಜೊತೆಗೆ ನಾಟಕರಚನೆಯನ್ನೂ ಅವರು ಕೈಗೊಂಡಿದ್ದು, **ಪುರುಷ ವಧು** (೧೯೩೭) ಅವರ ಮೊದಲ ನಾಟಕವಾಗಿದೆ. ಅನಂತರ ಅವರು **ಎಂಟು ನಾಟಕಗಳನ್ನು** ರಚಿಸಿರುತ್ತಾರೆ. ಅವುಗಳಲ್ಲಿ ಎರಡು ನಾಟಕಗಳು ಇಂದಿಗೂ ಅಪ್ರಕಟಿತ ರೂಪದಲ್ಲಿದ್ದರೆ, ಒಂದು ನಾಟಕವು ಅವರ ಕಾಲಾನಂತರ ಪ್ರಕಟವಾಗಿದೆ. ಇವುಗಳಲ್ಲದೆ, ಕುಡ್ಪಿಯವರು ಹರಟೆಗಳು, ಜೀವನಚರಿತ್ರೆ, ಸಂಪಾದನೆ ಮುಂತಾದ

ವಿವಿಧ ಪ್ರಕಾರಗಳಲ್ಲೂ ಕೆಲಸ ಮಾಡಿರುತ್ತಾರೆ. ಕುಡ್ಪಿಯವರ ಹವ್ಯಾಸಗಳು ಹಲವು. ಸಾಹಿತ್ಯ ಮತ್ತು ರಂಗಭೂಮಿಯ ಜೊತೆಗೆ ಕಲೆ ಮತ್ತು ಸಂಗೀತ ಕ್ಷೇತ್ರಗಳಲ್ಲೂ ಅವರು ಪರಿಶ್ರಮ ಹೊಂದಿದ್ದರು. ಅವರು ಓರ್ವ ವ್ಯಂಗ್ಯಚಿತ್ರ ಕಲಾವಿದರಾಗಿದ್ದರು, ಹಾರ್ಮೋನಿಯಂ, ಕೊಳಲು ನುಡಿಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದರು. ಶಾಸ್ತ್ರೀಯ ಸಂಗೀತವನ್ನು ತುಂಬ ಇಷ್ಟಪಡುತ್ತಿದ್ದರು. ಹಿಂದೂಸ್ಥಾನಿ ಸಂಗೀತಗಾರರ ಕಚೇರಿಗಳನ್ನು ಎಂದಿಗೂ ತಪ್ಪಿಸಿಕೊಳ್ಳುತ್ತಿರಲಿಲ್ಲವಂತೆ. ಮಧ್ಯರಾತ್ರಿಯವರೆಗೆ ಕುಳಿತು ಸಂಗೀತ ರಸಾಸ್ವಾದನೆ ಮಾಡುತ್ತಿದ್ದ ತಂದೆಯ ನೆನಪು ಮಕ್ಕಳಲ್ಲಿ ಉಳಿದಿದೆ.

ಕಳೆದ ಶತಮಾನದ ಮೂವತ್ತರ ಉತ್ತರಾರ್ಧ, ನಲವತ್ತು ಮತ್ತು ಐವತ್ತರ ದಶಕಗಳು ಕುಡ್ಪಿಯವರ ಸೃಜನಶೀಲತೆಯ ಫಲವತ್ತತೆಯ ಕಾಲ. ಅವರ ಹೆಚ್ಚಿನ ಕೃತಿಗಳು ಈ ಮೂರು ದಶಕಗಳಲ್ಲಿ ಮೂಡಿಬಂದಿವೆ. ಇವುಗಳ ಜೊತೆ ತಮ್ಮ ಜೀವನದ ಉಸಿರು ಎಂಬಂತೆ ಕಾಪಾಡಿಕೊಂಡು, ನಿರಂತರ ಮುಂದುವರಿಸಿಕೊಂಡು ಬಂದ **ಪ್ರಭಾತ** ಪತ್ರಿಕೆಯು ಅವರ ಜೊತೆಗೇ ವಿರಮಿಸಿತು. ಹೀಗೆ ಈ ಜಿಲ್ಲೆಯ ಸಾಹಿತ್ಯ, ಪತ್ರಿಕೋದ್ಯಮ ರಂಗಗಳಲ್ಲಿ ಮಿಂಚಿದ, ಹಲವಾರು ಹೊಸ ಬರಹಗಾರರನ್ನು ಗುರುತಿಸಿ, ಪ್ರಧಾನ ಸಾಹಿತ್ಯಧಾರೆಗೆ ಅವರನ್ನು ಪರಿಚಯಿಸಿದ ಕುಡ್ಪಿ ವಾಸುದೇವ ಶೆಣೈಯವರು ಕೊನೆಯವರೆಗೂ ಕ್ರಿಯಾಶೀಲರಾಗಿದ್ದವರು. ೧, ಫೆಬ್ರವರಿ, ೧೯೭೭ ರಂದೂ ಪತ್ರಿಕೆಯ ಆಫೀಸಿಗೆ ಹೊರಟುನಿಂತ ಅವರು ತೀವ್ರ ಹೃದಯಾಘಾತದಿಂದ ಕುಸಿದುಬಿದ್ದು, ಕಾಲನಿಗೆ ಶರಣಾದರು.

## ಕಥಾಜಗತ್ತು

ಕುಡ್ಪಿಯವರ ಮೊದಲ ಕಥಾಸಂಕಲನ **ಜೀವನದ ಸೊಗಸು** (೧೯೩೫). ಅನಂತರ ಅವರ **ಮೀರೆ ಮತ್ತು ನಾನು**, **ಜಪಾನ್ ಬೆಳಕು**, ಮತ್ತು **ಮಳೆಗಾಲದ ಸ್ವಪ್ನಗಳು** ಎಂಬ ಕಥಾಸಂಕಲನಗಳು ೧೯೪೪ರಲ್ಲಿ ಪ್ರಕಟವಾಗಿವೆ. ೧೯೫೩ ರಿಂದ ೫೬ ರ ಅವಧಿಯಲ್ಲಿ **ಆದರ್ಶನೊಬ್ಬನೇ, ಪಂಡಿತನ ಪಿಟೀಲು ಮತ್ತು ಇತರ ಕತೆಗಳು, ಜಾತಕ ಪಠನ ಮತ್ತು ಇತರ ಕತೆಗಳು** ಮತ್ತು **ಈ ಯುಗದ ಠೇಂಕಾರ–ಕುಮಾರ** ಇವು ಪ್ರಕಟವಾದವು. ಇವುಗಳಲ್ಲದೆ, **ಸಾಹಸದ ಕತೆಗಳು, ಹುಚ್ಚು ಕತೆಗಳು** ಎಂಬುವನ್ನೂ ಅವರು ಬರೆದಿರುವುದಾಗಿ ತಿಳಿದುಬರುತ್ತದೆ. ಇವುಗಳಲ್ಲಿ ನನಗೆ ದೊರೆತುದು ಕೇವಲ ಐದು ಕಥಾಸಂಕಲನಗಳು. ಅವುಗಳನ್ನು ಮುಂದಿನ ಭಾಗದಲ್ಲಿ ಸ್ಥೂಲವಾಗಿ ಪರಿಚಯಿಸಲಾಗಿದೆ.

**ಮೀರೆ ಮತ್ತು ನಾನು** (೧೯೪೪): ಕುಡ್ಪಿಯವರನ್ನು ಕಥಾಸಾಹಿತ್ಯದಲ್ಲಿ ಅಜರಾಮರವಾಗಿಸುವ ಶಕ್ತಿ ಇರುವುದಾದರೆ, ಅದು **ಮೀರೆ ಮತ್ತು ನಾನು** ಎಂಬ ಕಥಾಸಂಕಲನಕ್ಕೆ ಮಾತ್ರ ಸಾಧ್ಯ. ಇದರಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ. ಕುಡ್ಪಿಯವರು ಕಡೆದಿಟ್ಟ 'ಮೀರೆ' ಸಾಹಿತ್ಯ ಲೋಕದಲ್ಲಿ ಅನನ್ಯ ರತ್ನ. ತಮ್ಮ ಕಥಾಸಂಕಲನದ ಮುನ್ನುಡಿಯಲ್ಲಿ ಅವರೇ ಹೇಳುವಂತೆ

"ಮೀರೆ, ಮಂದಜೀವನವನ್ನು ತಿದ್ದಿ ಚೇತನ ಕೊಡುವ ಶಕ್ತಿ. . . ಅವಳು ಜಗಳವಾಡದ ದಿನವಿಲ್ಲ; ಜಗಳವಿಲ್ಲದ ದಿನವು ದಿನವಲ್ಲ. . . ಪತಿಯ ಅಭಿಪ್ರಾಯವನ್ನೊಪ್ಪದೆ ತಪ್ಪಿ, ಮತ್ತೆ ತಪ್ಪದೆ ಒಪ್ಪುವ, ಅವರೆ ಒಪ್ಪಿದೆನೆಂದು ಹೇಳಲೊಪ್ಪದ – ಸಿಡುಕಿನ ಬಾಲಿಕೆ. "ಇದೀ ಸಂಕಲನದ ಯಶಸ್ಸು ಕತೆಯ ನಿರೂಪಕನಿಗೆ (ನಾಯಕನಿಗೆ) ಸಲ್ಲುವಷ್ಟೇ ಆಕೆಗೂ ಸಲ್ಲುತ್ತದೆ. ನಿರೂಪಕ ಮತ್ತು ಆಕೆ ಒಂದು ನಾಣ್ಯದ ಎರಡು ಮುಖಗಳಂತೆ. ಒಬ್ಬರಿಲ್ಲದೆ ಇನ್ನೊಬ್ಬರಿಗೆ ಅಸ್ತಿತ್ವವಿಲ್ಲ; ಬೆಲೆಯಿಲ್ಲ; ಚಲಾವಣೆಯೂ ಇಲ್ಲ".

**ಮೀರೆ ಮತ್ತು ನಾನು** ಈ ಸಂಕಲನದಲ್ಲಿ ಒಟ್ಟು ಹದಿನೈದು ಕತೆಗಳಿವೆ. ೧೯೩೭ ರಿಂದ ೧೯೪೭ ರ ಅವಧಿಯಲ್ಲಿ ಕುಡ್ವಿಯವರು ಬರೆದ ಕತೆಗಳಲ್ಲಿ ಆಯ್ದ ಕೆಲವು ಈ ಸಂಕಲನದಲ್ಲಿ ಸೇರ್ಪಡೆಗೊಂಡಿವೆ. ಕಥೆಗೆ ಕಥಾನಾಯಕ ಮತ್ತು ಮೀರೆಯರೇ ಮುಖ್ಯ ಪಾತ್ರಗಳು. ಅವರ ಸಂಬಂಧದ ಸ್ವರೂಪ ಮತ್ತು ಆಸಕ್ತತೆಯ ಕುರಿತು ಕುಡ್ವಿಯವರು ಹೀಗೆ ಹೇಳಿದ್ದಾರೆ, "ಮೀರೆ ಇಲ್ಲಿ ಪತಿಯ ಒಡತಿಯಲ್ಲ; ಮೀರಾಪತಿಯು ಪತ್ನೀದಾಸನೂ ಅಲ್ಲ. ಅವರು ಎಲ್ಲದರಲ್ಲೂ ಸಮಭಾಗಿಗಳು. ಪ್ರೀತಿಸಿ, ಕಾದಾಡಿ, ಅದನ್ನು ಮರೆತು ಪುನಃ ಪ್ರೀತಿಸುವ ಸರ್ವಹಕ್ಕುಗಳೂ ತಮ್ಮದೆಂದು ಅವರು ಭಾವಿಸುತ್ತಾರೆ." ಇದರ ಸೊಗಸು, ಸಂಬಂಧದ ಸವಿರಾದ ಪದರಗಳು ಸಂಕಲನದ ಎಲ್ಲ ಕತೆಗಳಲ್ಲಿ ಒಡಮೂಡಿದೆ.

ಮೀರೆ ಮತ್ತು ನಿರೂಪಕರದು ಪುಟ್ಟ ಕುಟುಂಬ. ಅಲ್ಲಿ ಅವರಿಬ್ಬರೇ. ಮೂರನೆಯ ವ್ಯಕ್ತಿಯ ಆಗಮನ ನಿರೂಪಕನಿಗೆ ನುಂಗಲಾರದ ತುತ್ತು. ಆ ಮೂರನೆಯ ವ್ಯಕ್ತಿಯಾಗಿ ಮೀರೆಯ ಚಿಕ್ಕಮ್ಮ, ಸೋದರಮಾವ, ತಾಯಿ, ತಂದೆ, ಗೆಳತಿಯರು, ನೆರೆಕರೆಯವರು ಹೀಗೆ ಯಾರೇ ಬಂದರೂ, ಅವರ ನಿರ್ಗಮನದವರೆಗೆ ನಿರೂಪಕ ಅತ್ಯಂತ ಅಸ್ವಸ್ಥನಾಗುತ್ತಾನೆ. ಮೀರೆಗಾದರೋ ತನ್ನವರೆಂದರೆ ಇನ್ನಿಲ್ಲದ ಅಭಿಮಾನ, ಗೌರವ. ಈ ಧ್ರುವಗಳೇ ಅವರೊಳಗೆ ಕಲಹ ಹುಟ್ಟಲು ಕಾರಣವಾಗುತ್ತವೆ. **ಬಡವರ ಮನೆಯ ಲಕ್ಷ್ಮಿ, ಮೀರೆಯ ಚಿಕ್ಕಿ ಮೀರೆಯ ಮಾವ, ಬಹಿಷ್ಕಾರ, ಮುದ್ದು ಹೆಗ್ಗಣ, ಮೀಸೆ ಮತ್ತು ಅದರ ರಕ್ಷಣೆ** ಇಂತಹ ಕತೆಗಳಲ್ಲಿ ಮೇಲಿನ ಮಾತಿಗೆ ನಿದರ್ಶನಗಳಾಗುತ್ತವೆ. ಮೀರೆಗೂ ಆಕೆಯ ಚಿಕ್ಕಮ್ಮನಿಗೂ ಜಗಳ ತಂದಿಟ್ಟು, ಮೀರೆಯ ಚಿಕ್ಕಮ್ಮನ ಆಗಮನ ಎಂಬ ವಿಪತ್ತನ್ನು ನಿರೂಪಕ ಉಪಾಯವಾಗಿ ನಿವಾರಿಸಿಕೊಳ್ಳುವುದು **ಮೀರೆಯ ಚಿಕ್ಕಿ** ಕತೆಯ ವಸ್ತು. ಮೀರೆಗಾಗಿ ಆಕೆಯ ಬ್ರಹ್ಮಚಾರಿ ಸೋದರಮಾವನನ್ನು ಸಹಿಸಬೇಕಾಗಿ ಮತ್ತು ಉಪಚರಿಸಬೇಕಾಗಿ ಬಂದಾಗ, ಮೀರೆಗೂ ನಿರೂಪಕನಿಗೂ ಹತ್ತಿದ ಜಗಳ, ಸೋದರಮಾವ ಮನೆಕೆಲಸದಾಕೆಯೊಂದಿಗೆ ಗೃಹಸ್ಥಾಶ್ರಮ ಆರಂಭಿಸುವಲ್ಲಿಗೆ ಮುಕ್ತಾಯವಾಗುವುದು **ಮೀರೆಯ ಮಾವದ** ಕಥಾವಸ್ತು. **ಮುದ್ದು ಹೆಗ್ಗಣ** ಕತೆಯಲ್ಲಿ ಈ ದಂಪತಿಯ ಸುಪುತ್ರ 'ಸುಪ್ರು'ವಿನ ಆಗಮನವಾಗುತ್ತದೆ. ಸುಪ್ರು ಶಾಯಿ ಚೆಲ್ಲಿದನೆಂದು ದಂಪತಿಗಳಲ್ಲಿ ಹುಟ್ಟಿದ ಕಲಹ ಮತ್ತು ಮಾತಿನ ಚಕಮಕಿಯ ಸ್ವಾರಸ್ಯ ಹೀಗಿದೆ–

"ಶಾಯಿ ಹೋದರೆ ಅಷ್ಟು ಬಿರುಸಾಗಿ ಹೋಯಿತೆನ್ನಬೇಕೆ? ಹಾಗೆ ಹೇಳಿದ ಕೂಡಲೇ ಹೋದದ್ದು ಬಂತೆ? ಸುಪ್ರು ಹೇಗೆ ಕೂಗಿದ ನೋಡಿ!" ಎಂದು ಮೀರೆ ಸಿಡುಕಿನಿಂದ ಹೇಳಿದಳು.

ಮೇಜಿನ ಮೇಲೂ 'ಸುಪ್ರು'ವಿನ ತಲೆಮೇಲೂ, ಕೊಠಡಿಯಲ್ಲೂ ಮೀರೆಯ ಬಾಯಿಂದಲೂ ಶಾಯಿ ಚೆಲ್ಲಿಹೋಯಿತು.

"ಮೆಲ್ಲನೆ ಹೇಳಿದರೂ ಬಾರದು!" ಎಂದೆ. (ಸ್ವಲ್ಪ ನಂಜು.)

"ನಿಮ್ಮ ಮಾತಿನಂತೆ!" ಎಂದಳು ಮೀರೆ. (ಚತುರೋಕ್ತಿ.)

"ಅಥವಾ ಮದುವೆಯಾದ ಗಂಡಸಿನ ಪೌರುಷದಂತೆ!" ಎಂದೆ. (ಚತುರೋಕ್ತಿ ಮತ್ತು ನಂಜು.)

"ಅಥವಾ ಪೌರುಷ ಕಳೆದುಕೊಂಡ ಗಂಡಸಿನ ಹೆಂಡತಿಯ ಸುಖದಂತೆ!" ಎಂದಳು ಮೀರೆ.

(ನೂರುಮಡಿ ನಂಜು.)

"ಅಥವಾ ಸುಖವನ್ನು ದುಃಖವೆಂದು ಕರೆದು ಗಂಡನನ್ನು ಗೋಳಾಡಿಸುವ ಹೆಂಡತಿಯ ಮತಿಯಂತೆ!" ಅಂದೆ. (ನಂಜಿನ ಅರಸು.)

"ಅಂಜಲಿಯನ್ನು ಅಮೃತವೆಂದು ಕರೆಯಬೇಕೆಂದು ಒತ್ತಾಯಪಡಿಸುವವರ ಸೌಜನ್ಯದಂತೆ!" ಎಂದಳು ಮೀರೆ. (ಹಾಲಾಹಲ.)

ಅಲ್ಲಿಗೆ ನನ್ನ ಚತುರೋಕ್ತಿ ಮುಗಿಯಿತು. ನಾನು ಗಂಡಸೂ ಅಲ್ಲ, ಸುಖ ಕೊಡುವವನೂ ಅಲ್ಲ; ಕೊಡಬಲ್ಲವನೂ ಅಲ್ಲ, ಕೊಡಲೂ ಆರ–ಎಂದು ನನಗೆ ತಿಳಿಯಿತು. ಮೊದಲೇ ಕಳವಳ. ಆ ಮೇಲೆ ಶಾಯಿಯ ನಷ್ಟ, ಆ ಮೇಲೆ ಮೀರೆಯ ಹಾಲಾಹಲ!– ಆಗಲೇ "ಸುಪ್ರು" ಪುನಃ ನನ್ನ ಮುಂದೆ ಸುಳಿದಾಡುತ್ತಾ "ತ್ತೆ ತ್ತೆ ತ್ತೆ" ಎಂದು, ಮೇಜಿನ ಮೇಲಿರಿಸಿದ ಫೌಂಟನಿಗೆ ಕೈಹಾಕುತ್ತಿದ್ದನು. ಆಕೆ, ಅಲ್ಲಿಯೂ ಆತನನ್ನು ಪ್ರೀತಿಯಿಂದ ತಬ್ಬಿದಳು.

"ಹೆತ್ತವರಿಗೆ ಹೆಗ್ಗಣ ಮುದ್ದು!" ಎಂದೆ. (ಸುಪ್ರುವು ನನಗೆ ಹೆಗ್ಗಣದಂತೆ ಕಂಡಿಲ್ಲದಿದ್ದರೂ.)

(ಪು.೫೧–೫೨). . . . .

ಜಗಳದ ಬಿಸಿ ಏರುತ್ತ ಒಂದು ಸಂದರ್ಭದಲ್ಲಿ ಮೀರೆ,

"ತವರುಮನೆಗೆ ಹೊರಟೆನೆಂದಳು!

"ಅಥವಾ ಟ್ರೈನಿಂಗ್ ಶಾಲೆಗೆ!" ಎಂದೆ.

"ತವರುಮನೆಯೆಂಬುದು ಟ್ರೈನಿಂಗ್ ಶಾಲೆಯೇ? ಏಕೆ?" ಎಂದು ಅಳುತ್ತ ಕೇಳಿದಳು.

"ಗಂಡನನ್ನು ಹದಮಾಡಲು ತರಬೇತಿ ಪಡೆಯಲಿಕ್ಕೆ!" ಎಂದೆ.

"ಗಂಡನ ಮನೆ ಮೃಗಾಲಯವೇ? ಗಂಡನು ಮೃಗವೇ?" ಎಂದು ಅಳುತ್ತಲೇ ನಂಜು ಮಾತಾಡಿದಳು.

"ಗಂಡನು ಗೂಡಿನಲ್ಲಿಟ್ಟ ಸಿಂಹ!" ಎಂದೆ.

“ಹಾಗಾದರೆ, ನಾನು ಬಂಧನವನ್ನು ಕಡಿದುಕೊಳ್ಳುವ ಸಿಂಹಿಣಿ!” ಎನ್ನುತ್ತ, ಮೀರೆ, ಸುಪ್ಪುವನ್ನು ಎತ್ತಿಹಿಡಿದು, ನಿಂತಳು.

“ಬಾಗಿಲು ಇತ್ತ ಅಲ್ಲ, ಆ ಕಡೆ!” ಎಂದು ದಾರಿತೋರಿಸಿದೆ.

“ರಾತ್ರಿಯಾಯಿತೆಂದು ಹೆದರುವವಳಲ್ಲ!” ಎಂದಳು.

“ಸಿಂಹಿಣಿ –” ಎಂದೆ.

“ಇನ್ನು ಬರುವುದಿಲ್ಲ” ಎಂದಳು.

“ನನ್ನ ಆಶೀರ್ವಾದ!” ಎಂದೆ.

“ಆಮೇಲೆ ತಮಗೆ ಸುಖವಾಗಬಹುದು!” ಎಂದಳು.

“ಈಗಲೇ ಕೊಂಚ ನಾಡಿಗಳೆಲ್ಲ ಉಲ್ಲಾಸಿತವಾಗಿವೆ” ಎಂದೆ.

“ನನ್ನ ಸೀರೆ, ಕುಪ್ಪಸ, ಪೆಟ್ಟಿಗೆ ಯಾವದೂ ನನಗೆ ಬೇಡ!” ಎಂದಳು.

“ನಿನ್ನ ಜ್ಞಾಪಕಾರ್ಥವಾಗಿ ಇಟ್ಟುಕೊಳ್ಳುವೆನು!” ಎಂದೆ.

“ನಾನೀಗಲೇ ಆತ್ಮಹತ್ಯೆ ಮಾಡಿಕೊಳ್ಳುವೆನು!” ಎಂದಳು.

ಅಲ್ಲಿ ನನ್ನ ಎದೆ ಝುಮ್ಮಾಯಿತು.(ಪು.೫೩)

ಮೀರೆಯು ‘ಆತ್ಮಹತ್ಯೆ’ ಮಾಡಿಕೊಳ್ಳುವೆ ಎಂದುದು ಜಗಳದ ಕ್ಲೈಮ್ಯಾಕ್ಸ್. ಮುಂದೆ ಆ್ಯಂಟಿಕ್ಲೈಮ್ಯಾಕ್ಸ್ ಆರಂಭ. ಕತೆ ವಿರುದ್ಧ ಗತಿಯಲ್ಲಿ ಚಲಿಸತೊಡಗುತ್ತದೆ. ಈಗ ನಿರೂಪಕನದು ರಮಿಸುವ ಕೆಲಸ. ಮೊದಲು ನಿರಾಕರಿಸಿದ್ದನ್ನೆಲ್ಲ ಒಪ್ಪಿಕೊಳ್ಳುವ ಮತ್ತು ಸಮರ್ಥಿಸುವ ಕೆಲಸವನ್ನು ಜಾಣ್ಮೆ ಮತ್ತು ಕಲೆಗಾರಿಕೆಯಿಂದ ಮಾಡತೊಡಗುತ್ತಾನೆ. ದಂಪತಿಗಳಲ್ಲಿ ರಾಜಿಯಾಗುವಷ್ಟರಲ್ಲಿ ಸುಪ್ಪು ಕಣ್ಮರೆಯಾಗಿರುತ್ತಾನೆ. ಕೆಲ ನಿಮಿಷಗಳಲ್ಲಿ ಆತನನ್ನು ಹುಡುಕಿ ಹೊರಟ ಮೀರೆಯಿಂದ ಉದುರಿದ ಆಣಿಮುತ್ತುಗಳು "**ರಣಹದ್ದೇ! ಕೋತಿ!! ಕಳ್ಳಬೆಕ್ಕೇ!!!. . .**" ಅಷ್ಟೇ ಅಲ್ಲ, ಆರಂಭದಲ್ಲಿ "ಅಯ್ಯೋ ಶಾಯಿ ಚೆಲ್ಲಿ ಹೋಯ್ತು" ಎಂದದ್ದು ಏರಟಾಯ್ತು ಎಂದು ಗದರಿದ ಮೀರೆ ಇಲ್ಲಿ ಸುಪ್ಪುವಿಗೆ ಗುದ್ದು (ಪಟು) ನೀಡುತ್ತಿದ್ದಾಳೆ. ಇಷ್ಟಕ್ಕೂ ಸುಪ್ಪೂ ಮಾಡಿದ ಅಪರಾಧ ಆಕೆಯ ಸ್ನೋ ಬಾಟಲಿ ಖಾಲಿ ಮಾಡಿದ್ದು!

**ಮೀಸೆ ಮತ್ತು ಅದರ ರಕ್ಷಣೆ** ಇನ್ನೊಂದು ಇದೇ ಬಗೆಯ ಕತೆ. ಇಂತಹ ಕತೆಗಳು ಸಾಮಾನ್ಯ ಜನರ ದೈನಂದಿನ ಜೀವನದ ಘಟನಾವಳಿಗಳನ್ನೇ ಅತ್ಯಂತ ಸೊಗಸಾಗಿ ಕಟ್ಟಿಕೊಡುವುದರಿಂದ ಮತ್ತು ಮನುಷ್ಯ ಸ್ವಭಾವದ ವಿವಿಧ ಮಗ್ಗುಲುಗಳನ್ನು ಪರಿಚಯಿಸುವುದರಿಂದ ಹಾಗೂ ಇವೆಲ್ಲಕ್ಕೂ ಗರಿಕಟ್ಟುವಂತೆ ದಾಂಪತ್ಯದ ಸಂಹಿತೆಯನ್ನು ರಮ್ಯವಾಗಿ ನಿರೂಪಿಸುವುದರಿಂದ ಓದುಗರ ಮನವನ್ನು ನಿಸ್ಸಂಶಯವಾಗಿ ಗೆದ್ದುಕೊಂಡವು.

ಮೀರೆ ಕೇವಲ ಗೃಹಬಂಧಿಯಲ್ಲ. ಪತ್ರಿಕೆ ಓದುವಾಕೆ; ಹೊಸ ಹೊಸ ವಿಚಾರಗಳನ್ನು ಕೆದಕುವಾಕೆ; ಸಂಪಾದನೆಯೊಂದಿಗೆ ಉಪಸಂಪಾದನೆಯ ಬಗ್ಗೆ ಗಂಡನಿಗೆ ಪ್ರೇರೇಪಣೆ ನೀಡುವಾಕೆ. ಅಂತಹ ಒಂದು ಕತೆ **ಮನೆ ಕೈಗಾರಿಕೆಯಲ್ಲಿ** ಹಲ್ಲುಪುಡಿ ತಯಾರಿಗೆ ಹೊರಟು, ಅದರ

ಬಳಕೆಯಿಂದ ಹಲ್ಲುನೋವಿಗೆ ಈಡಾಗಿ, ತಯಾರಿಸಿದ ಹಲ್ಲುಪುಡಿ ಎಲ್ಲವನ್ನೂ ಹೊರಗೆಸೆಯುವ ಸ್ಥಿತಿ ಬಂದುದನ್ನು ಕಾಣುತ್ತೇವೆ. ಮಾಡಿದ ಹಲ್ಲುಪುಡಿಯನ್ನು ತನ್ನ ಆದೇಶದಂತೆ, ಗಂಡ ಹೊರಗೆ ಎಸೆದುಬಂದುದು ಖಚಿತವಾದ ತಕ್ಷಣವೇ ಮೀರೆಯ ಹಲ್ಲುನೋವು ಮಾಯವಾಗುತ್ತದೆ!

ಮೀರೆಯೂ ಮುನ್ಸೀಫರೂ ಕತೆಯಲ್ಲಿ ಮೂರು ತಿಂಗಳ ಕಾಲ ಮನೆಯನ್ನು ಖಾಲಿ ಇಡುವ ಬದಲು ಊರಿಗೆ ಹೊಸದಾಗಿ ಬಂದ ಮುನ್ಸೀಫರಿಗೆ ಬಾಡಿಗೆಗೆ ನೀಡುವುದು ಸೂಕ್ತ ಎಂಬ ನಿಲುವು ಮೀರೆಯದು. ನಿರೂಪಕನ ನಿರಾಕರಣೆಗೆ ಆಕೆ ಚಿಕ್ಕಾಸಿನ ಬೆಲೆಯನ್ನೂ ನೀಡುವುದಿಲ್ಲ. ಅಷ್ಟೇ ಅಲ್ಲ, ಮನೆ ಬಾಡಿಗೆಗೆ ಬರುವಂತೆ ಅದರ ಪರವಾಗಿ ಮಾತಾಡುವ ಕೆಲಸವನ್ನೂ ಗಂಡನಿಗೇ ವಹಿಸಿಬಿಡುತ್ತಾಳೆ. ಆತನೋ ಬಂದ ಮುನ್ಸೀಫ ದಂಪತಿಗಳಿಗೆ ಮನೆ, ತೋಟಗಳನ್ನು ತೋರಿಸುವ ಸಂದರ್ಭವನ್ನೇ ಬಳಸಿಕೊಂಡು, ತನಗೆ ಇತ್ತ ಕೆಲಸದ ವಿರುದ್ಧ ದಿಕ್ಕಿನಲ್ಲಿ ಆತ ಕಾರ್ಯನಿರ್ವಹಿಸುತ್ತಾನೆ. ಅದರ ಸ್ವಾರಸ್ಯ ಹೀಗಿದೆ–

'ಮನೆ ಎಷ್ಟೊಂದು ತಂಪು' ಎಂದು ಮುನ್ಸೀಫ ದಂಪತಿಗಳು ಹೇಳಿದರೆ, ನಿರೂಪಕ
'ಸೆಕೆಗಾಲದಲ್ಲಿ ಬಹಳ ಸೆಕೆ, ತಡೆಯಲಾಗುವುದಿಲ್ಲ' ಎನ್ನುತ್ತಾನೆ.
'ಎಷ್ಟು ಸುಂದರ ತೋಟ' ಎಂದು ಅವರು ಉದ್ಗರಿಸಿದರೆ, ಈತ,
'ಗಿಡಗಳಲ್ಲಿ ಒಂದೇ ಒಂದು ಹೂ ಹುಟ್ಟುವುದಿಲ್ಲ; ಕೆಟ್ಟ ಮಣ್ಣು' ಎನ್ನುತ್ತಾನೆ.
ಅವರು ಬೆಲೆ ಕೊಡದಿದ್ದಾಗ,
'ಬಾವಿ ತುಂಬಾ ಆಳ' ಎನ್ನುತ್ತಾನೆ.

ಅದಕ್ಕೂ ಅವರು ತಕರಾರು ಎತ್ತದಿದ್ದಾಗ,

'ಚಿಕ್ಕಮಕ್ಕಳ ಗಲಾಟೆ ಇಲ್ಲಿ ಜಾಸ್ತಿ' ಎಂದು ಬೆದರಿಸತೊಡಗುತ್ತಾನೆ; ಮುಂದೆ ಹೀಗೇ 'ಬಾವಿಗೂ ಅಡಿಗೆಮನೆಗೂ ದೂರ, ಸಂಜೆಯಾದೊಡನೆ ನೆರೆಮನೆಯಾತ ಹರಟೆಗೆ ಬಂದು ಕಾಡುತ್ತಾನೆ, ಮನೆಯ ಪೀಠೋಪಕರಣ ದುರಸ್ತಿಗೆ ಬಂದಿವೆ' ಎಂದು ಒಂದೊಂದೇ ಆತಂಕಗಳನ್ನು ಮುನ್ಸೀಫರ ಮುಂದಿಡುತ್ತಾನೆ. ಅವರಿಗೋ ಅವೆಲ್ಲ ಆತಂಕಗಳೇ ಆಗದಾಗ ಹತಾಶನಾಗುತ್ತಾನೆ. ಆಗ ಮೀರೆ ಬಂದು, ಬಲು ಉತ್ಸಾಹದಿಂದ, ಮುನ್ಸೀಫರು ಈ ಮನೆಗೆ ಬಾಡಿಗೆಗೆ ಬರಲು ಎರಡನೇ ಯೋಚನೆ ಮಾಡಬಾರದೆಂದು 'ರೇಲ್ವೆಸ್ಟೇಷನ್ ಇಲ್ಲಿಗೆ ತೀರ ಸಮೀಪ' ಎಂದು ಹೇಳುತ್ತಾಳೆ. ಈ ಮಾತು ಕೇಳಿದ್ದೇ ಮುನ್ಸೀಫರು ಏಕಾಏಕಿ ತಮ್ಮ ಮನಸ್ಸು ಬದಲಾಯಿಸಿ, ಕತೆಗೆ ಭಿನ್ನ/ಅನಿರೀಕ್ಷಿತ ತಿರುವನ್ನು ನೀಡುತ್ತಾರೆ.

ಹಾಗಲವಾಡಿಯ ಕುದುರೆ ಇನ್ನೊಂದು ವಿಶಿಷ್ಟ ಕತೆ. ತನ್ನ ಆರ್ಥಿಕ ಮುಗ್ಗಟ್ಟಿನ ಬಗ್ಗೆ ನಿರೂಪಕ ಚಿಂತಿತನಾಗಿದ್ದಾಗ ಮೀರೆ ಕುದುರೆ ಕೊಂಡುಕೊಳ್ಳುವ ಬಗ್ಗೆ ಮಾತೆತ್ತುತ್ತಾಳೆ. ಅದರ ಸ್ವಾರಸ್ಯ ಹೀಗಿದೆ–

"ಒಂದು ಕುದುರೆ ಕೊಂಡುಕೊಂಡರೆ ಹೇಗೆ?" ಎಂದು ಮೀರೆ ಪ್ರಶ್ನಿಸಿದಳು.

“ಅಬ್ಬಿಸೀನಿಯುವನ್ನೆ ಕೊಂಡುಕೊಳ್ಳೋಣ! ಎಂದೆ.

“ಏಕೆ?”

“ಕುದುರೆಯೇಕೆ” ಎಂದು ನಾನು ಪ್ರಶ್ನಿಸಿದೆ.

“ಗಾಡಿಗೆ ಕಟ್ಟಲಿಕ್ಕೆ” ಎಂದಳು ಮೀರೆ.

“ಅಬ್ಬಿಸೀನಿಯುವು, ನಾವು ಆ ಗಾಡಿಯಲ್ಲಿ ಕುಳಿತು ಸವಾರಿ ಮಾಡಲಿಕ್ಕೆ!” ಎಂದು ನಾನಂದೆ.

“ನಿಮಗೆ ಹುಚ್ಚು!” ಎಂದಳು ಮೀರೆ.

“ನಿನಗೆ ಪೆಚ್ಚು!” ಎಂದು ನಾನಂದೆ.

“ಕುದುರೆಯನ್ನು ಕೊಂಡುಕೊಳ್ಳುವುದು ಸಾಧ್ಯ; ಅಬ್ಬಿಸೀನಿಯುವು ಅಚಿಂತ್ಯ–” ಎಂದಳು ಮೀರೆ.

“ಹೇಗೆ?” ಎಂದು ಕೇಳಿದೆ.

“ಉಪಾಯವಿದೆ!’ ಎಂದಳು.

ಉಪಾಯ ಹೇಳುವುದರಲ್ಲಿ ಮೀರೆ ಬಲು ಜಾಣೆ. ತಿಂಗಳಿಗೆ ೩೦ ರೂಪಾಯಿ ಸಂಬಳವಿರುವವನು, ಒಂದು ರೇಲ್ವೆ ಕಂಪೆನಿಯನ್ನು ಹೇಗೆ ಕೊಂಡುಕೊಳ್ಳ ಬಹುದೆಂಬುದನ್ನು ಆಕೆ ಹೇಳುತ್ತಾಳೆ. “. . . .ಏಷು ಮಂತ್ರಿ” ಎಂದೇನೋ ಶ್ಲೋಕವಿರುವುದಲ್ಲಾ–ಮೀರೆ ಆ ಮಂತ್ರಿ! (ಪು.೧೫–೧೬)

ಅವಳು ಹುಚ್ಚು ಕಲ್ಪನೆಯ ಬೆನ್ನತ್ತಿ ವಿಹರಿಸುತ್ತಿರುವಾಗ, ನಿರೂಪಕ ಆಕೆಯನ್ನು ವಾಸ್ತವಕ್ಕೆ ಎಳೆತರಲು ಯತ್ನಿಸಿ ಸೋಲತೊಡಗುತ್ತಾನೆ. ಆಗ

“. . . . ಮೀರಾ ನಿಲ್ಲು! ಕುದುರೆ ಸತ್ತು ಹೋಯಿತು!”

“ಹೇಗೆ?”

“ಗಾಡಿ ಬರುವವರೆಗೆ, ಎರಡು ತಿಂಗಳು ಅದಕ್ಕೆ ಹುರುಳಿ ಇಲ್ಲದಿದ್ದರೆ ಕುದುರೆಗೆ ಭಾವಿಸಲಿಕ್ಕೆ ಬರುತ್ತದೆಯೇ?”

“ಏನಾದರೂ ಮಾಡಿ. . . .”

‘ಅದಕ್ಕೆ ಊಟ ಮಾಡಬೇಡವೆಂದು ಯೋಗಾಭ್ಯಾಸ ಕಲಿಸುವ ಹೊರತು ಮತ್ತಾವ ಉಪಾಯ?”

“ನಮ್ಮ ಹಿತ್ತಿಲಿನ ಹುಲ್ಲು. . . .?”

“ನಮ್ಮ ಹಿತ್ತಿಲಲ್ಲಿ ಕುದುರೆಗೆ ಸಾಕಾಗುವಷ್ಟು ಹುಲ್ಲು ಬೆಳೆದರಾಗಬಹುದು. ಆದರೆ, ಕುದುರೆಗಳಿವೆಯೆಂದು ಹುಲ್ಲು ಬೆಳೆವುದಿಲ್ಲ–ಮಣ್ಣಿನ ಗುಣ ನೋಡಿಯೇ ಬೆಳೆಯುತ್ತದೆ.”

“ಹುಲ್ಲನ್ನು ತರೋಣ”

“ದುಡ್ಡು?”

"ದುಡ್ಡು ಕೊಡದೆ ಹುಲ್ಲು ಸಿಗದೆಂದು ಬಲ್ಲೆ. ದುಡ್ಡು ಕೊಡಬೇಕು; ಮತ್ತೆ ಸ್ವಲ್ಪ ಹೆಚ್ಚು

ಸಾಲ ಮಾಡಿದರಾಯಿತು. ಗಾಡಿ ಬಂದ ಮೇಲೆ ಸವಾರಿಮಾಡಿಸಿ, ಆ ಸಾಲ ತೀರಿಸೋಣವಂತೆ."

"ಕುದುರೆ ಬಂತೆಂದು ಭಾವಿಸೋಣ–ಅದು, ನಮ್ಮೊಡನೆ ಹುಲ್ಲಿಗೆ ದುಡ್ಡಿಲ್ಲದಾಗ– ದುಡ್ಡೂ

ಹುಲ್ಲೂ ಸಾಲ ಸಿಗದಿದ್ದಾಗ–ತೋಟಕ್ಕೆ ಪ್ರಯಾಣ ಬೆಳೆಸಿ ಹೂವಿನ ಗಿಡಗಳನ್ನು ತಿಂದರೆ? ಆ

ಮೇಲೆ ಪರರ ತೋಟಗಳಿಗೂ ನುಗ್ಗಿ ಸಸ್ಯಲೋಕವನ್ನೆಲ್ಲ ಧ್ವಂಸ ಮಾಡಿದರೆ?"

"ಅದನ್ನು ಕಟ್ಟಿಹಾಕಬೇಕು!"

"ಹಸಿದ ಕುದುರೆಗೆ ಹಗ್ಗವು ಈಡೇ? ಮತ್ತೆ, ಹಸಿದುದನ್ನು ಕಟ್ಟಬೇಕೆ? ಅದು ನಮ್ಮ ಗಾಡಿಯನ್ನೆಳೆಯಬೇಡವೇ? . . . . . . . ."

"ನಿಲ್ಲಿ. . . . . . ."

"ಕುದುರೆಗೆ ಜೀವವಿಲ್ಲವೇ?"

"ನಿಲ್ಲಿ. . . . . . ."

"ನಮಗೆ ಪ್ರಾಣದಯೆ ಇಲ್ಲವೇ?"

"ನಿಲ್ಲಿ, ನಿಲ್ಲಿ. . . . ."

"ಗಾಡಿಗೆ ರಿಪೇರಿಗಳಿಲ್ಲವೇ?"

"ನಿಲ್ಲಿ. . . . . ."

"ಬಂಡಿಯನ್ನು ಹೊಡೆವವನಿಗೆ ಸಂಬಳ ಇಲ್ಲವೇ?"

"ನಿಲ್ಲಿ. . . . ."

"ಮುನಿಸಿಪಲ್ ಟೇಕ್ಸ್ ಇಲ್ಲವೇ?"

"ನಿಲ್ಲೀ. . . . ."

"ನನಗೆ ತಲೆ ಇಲ್ಲವೇ?"

"ನಿಲ್ಲಿ– ೀ. . . . ."

"ನಿನಗೆ ಬೇರೆ ಕೆಲಸವಿಲ್ಲವೇ?"

"ಅಯ್ಯೋ. . . . . ."

ಅಲ್ಲಿ ನನಗೆ ಉಸಿರು ನಿಂತಿತು. ಮೀರೆ "ಅಯ್ಯೋ" ಎಂದರೆ, ಸಾಮಾನ್ಯ ಸ್ಥಿತಿಯಲ್ಲಿದ್ದ ವಾತಾವರಣವು ಕೆಟ್ಟಿತೆಂದು ಅರ್ಥ. "ಅಯ್ಯೋ" ಎಂದ ಮೇಲೆ ಆಕೆ–

(೧) ತವರು ಮನೆಗೆ ಹೊರಡಲು ಸಾಕು.

(೨) ಬಾವಿಗೆ ಹಾರಲು ಸಾಕು.

(೩) ಕನ್ನಡಿಯೊಡೆಯಲು ಸಾಕು.

(೪) ಕುಳಿತಲ್ಲೆ ನಿದ್ದೆಹೋಗಲೂ ಸಾಕು.

(೫) ಆ ದಿನ ಅಡುಗೆ ಮಾಡದಿರಲೂ ಸಾಕು.

. . . . . . . ಇದರಲ್ಲಿ ಯಾವುದೊಂದೂ ಆಗಬೇಕೆಂದು ನಾನು ಇಚ್ಛಿಸುವವನಲ್ಲ. (ಪು.೧೭-೧೯)

ಮೇಲಿನ ಭಾಗ ಕುಡ್ವಿಯವರ ಸಂಭಾಷಣೆಯ ಸೊಗಸು ಮತ್ತು ಚುರುಕುತನಕ್ಕೆ ಒಳ್ಳೆಯ ಉದಾಹರಣೆ. ಈ ದಂಪತಿಗಳು ತಮ್ಮ ಜಗಳವನ್ನು ಎಲ್ಲಿ ನಿಲ್ಲಿಸಬೇಕು ಎಂದು ಸರಿಯಾಗಿ ಅರಿತವರು. ಹೀಗಾಗಿ ತಮಾಷೆ ಇಲ್ಲಿ ಯಾವತ್ತೂ ವಿಪರೀತಕ್ಕೆ ಹೋಗುವುದಿಲ್ಲ. ಬದಲಾಗಿ ಒಬ್ಬರು ಹಿಂದೆ ಸರಿಯುವ ಮೂಲಕ ಒಂದೋ ಸುಖಾಂತವಾಗುತ್ತದೆ ಇಲ್ಲವೇ ವಿಭಿನ್ನ ಗತಿಯಲ್ಲಿ ಚಲಿಸತೊಡಗುತ್ತದೆ.

ಈ ಮೀರೆ ಸ್ವಲ್ಪ ಹಟಮಾರಿ, ಮಾತಿನಲ್ಲಿ ಚತುರೆ, ಹಿಡಿದದ್ದನ್ನು ಸಾಧಿಸುವ ಹೆಬ್ಬಯಕೆ ಹೊಂದಿದಾಕೆ; ಅದಕ್ಕಾಗಿ ಮಾತು, ನಗು, ಮುನಿಸು, ಮುಂಗೋಪ, ಅಳು ಮುಂತಾದ ಸಾಂದರ್ಭಿಕ ಅಸ್ತ್ರಗಳನ್ನು ಸಮರ್ಥವಾಗಿ ನಿರೂಪಕನ ಮೇಲೆ ಪ್ರಯೋಗಿಸಬಲ್ಲ 'ಬಿಲ್ಲಾಳು'! ಇವೆಲ್ಲವುಗಳಿಗೆ ಮೆರುಗಿಟ್ಟಂತೆ ಅತ್ಯಂತ ಪ್ರಾಮಾಣಿಕಳು. ಇಲ್ಲಿಯ ನಿರೂಪಕ ಮಧ್ಯಮವರ್ಗದ, ಮಡದಿಯ ಇಂಗಿತಕ್ಕೆ ಬೆಲೆ ಕೊಡುವ, ಅವಳ ಹಟಮಾರಿತನವನ್ನು ಸಾಂದರ್ಭಿಕ ಉಪಾಯಗಳಿಂದ ಮುರಿಯುತ್ತಾ ಅವಳನ್ನು ಗೆಲ್ಲುವ ಕಲೆಯಲ್ಲಿ ಪಾರಂಗತನಾದ ಚತುರ! ಹೀಗಾಗಿ ಅವರ ದಾಂಪತ್ಯ, ಅದರಲ್ಲಿ ಏಳುವ ಕಾಲಿಕವಾದ ಕಲಹಗಳು 'ಗಂಧ ತೀಡಿದ್ಹಾಂಗ' ತಂಪು, ಕಂಪುಗಳನ್ನು ಓದುಗರಿಗೆ ಉಣಬಡಿಸುತ್ತವೆ. ಕುಡ್ವಿಯವರು ಹೇಳುವಂತೆ "ಕನ್ನಡ ಕಥಾಪ್ರಪಂಚದಲ್ಲಿ ಇದೊಂದು ಹೊಸ ಪ್ರಯೋಗ. ಮೊದಲನೆ "ಮೀರಾ ಕತೆಯು ೧೯೩೦ರಲ್ಲಿ ಪ್ರಕಟವಾಯಿತು. ಅಂದಿನಿಂದ ನೂರಾರು ಮೀರೆಗಳು ನಾನಾ ಹೆಸರು ಧರಿಸಿ ಜನನಕ್ಕೆ ಬಂದಿರುವರು. ಮೀರಾ ಕತೆಗಳ ಅನುಕರಣವೇ ಮೀರೆಯ ಅಸ್ತಿತ್ವದ ಅರ್ಹತೆಯನ್ನು ತೋರಿದೆ" ಎಂಬ ಮಾತು ಅಕ್ಷರಶಃ ನಿಜ. ಮಂಗಳೂರಿನ ಇನ್ನೋರ್ವ ಲೇಖಕರಾದ ರಮಾನಂದ ಘಾಟೆಯವರು "ಸೀತೆ"ಯನ್ನು ಇದೇ ಮಾದರಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಅಂದಿನ ಓದುಗರು ನೆನಪಿಸಿಕೊಳ್ಳುವಂತೆ ಕುಡ್ವಿ ಮತ್ತು ಘಾಟೆಯವರ ಈ ಕತೆಗಳಿಗಾಗಿ ಜನರು ಪತ್ರಿಕೆಯ ಮುಂದಿನ ಸಂಚಿಕೆಗೆ ತುದಿಗಾಲಿನಲ್ಲಿ ಕಾಯುತ್ತಿದ್ದರಂತೆ.

**ಜಪಾನ್ ಬೆಳಕು ಮತ್ತು ಇತರ ಕತೆಗಳು**(೧೯೪೮): ಕುಡ್ವಿಯವರ **ಜಪಾನ್ ಬೆಳಕು** ಹದಿನಾರು ಸಣ್ಣಕತೆಗಳನ್ನು ಒಳಗೊಂಡ ಸಂಕಲನ. ಇವುಗಳಲ್ಲಿ **ಜಪಾನ್ ಬೆಳಕು** ಮತ್ತು **ಪಾಕೀಟುಗಳ ಪರ್ಯಾಯ** ಎಂಬ ಎರಡು ಕತೆಗಳು ವಿಶಿಷ್ಟವಾಗಿವೆ.

ಕುಡ್ವಿಯವರ ಚಿತ್ರಕ ಶಕ್ತಿ ಜಪಾನ್ ಬೆಳಕು ಕತೆಯಲ್ಲಿ ಚೆನ್ನಾಗಿ ಮೂಡಿಬಂದಿದೆ. ಆರಂಭದಲ್ಲಿ ಅಂಗಡಿಯಾತ, ಆತನ ವ್ಯಾಪಾರೀಧರ್ಮ ಮತ್ತು ಆತ ಮಾರುತ್ತಿದ್ದ ಜಪಾನ್‌ನಿಂದ ಆಮದಾದ ದೀಪಗಳು ಇವುಗಳನ್ನು ಅವರು ಕತೆಯಲ್ಲಿ ಕಟ್ಟಿಕೊಟ್ಟ ಬಗೆ ಅನನ್ಯವಾಗಿದೆ.

"ಅವನ ಅಂಗಡಿ 'ಕಟ್ಲೇರಿ'ಯದು. ಜಪಾನು, ಪಿಂಗಾಣಿ ಕೈಗಾರಿಕೆ ಆರಂಭಿಸಿದಾಗ, ಅದು ಮಾಡಿದ ಸರಕು ಅವನಲ್ಲಿ ಈಗಲೂ ಇದೆ. ಆದರೆ, ವ್ಯಾಪಾರೀ ಧರ್ಮದ ನಂ.೧ ೧ನೇ ಶ್ಲೋಕಕ್ಕನುಸಾರವಾಗಿ "ಕುಲದೇವರ ಆಣೆ; ಮೊನ್ನೆ ಬಂದ ಪಾರ್ಸೆಲು!" ಎನ್ನುತ್ತಾನೆ. ಪಿಂಗಾಣಿ ಸಾಮಾನು ಕೊಳೆಯುವುದಿಲ್ಲ; ತುಕ್ಕು ಹಿಡಿಯುವುದೂ ಇಲ್ಲ. ನಾನವನನ್ನು ದಾಕ್ಷಿಣ್ಯಕ್ಕಾಗಿ ನಂಬುತ್ತೇನೆ.

ದಯಾಳುವಿನ ಅಂಗಡಿಯಲ್ಲಿ ಪೆರ್ರಿ ಪೆಪರ್ ಮಿಠಾಯಿ ಇದೆ; ಜೊನ್ನಿ ಸಾಹೇಬರ ಪೆನ್ಸಿಲೂ ಇದೆ; ತುಫಾನಿಗೆ ಆರಿಹೋಗದ ಲಾಟಾನೂ, (ತುಫಾನು ಇಲ್ಲದಿದ್ದಾಗ ಆರಿಹೋಗುತ್ತದೆ!) ಮಡಿವಾಳನಲ್ಲೂ ಮಡಿಯುಲಾರದ ಗುಂಡಿಗಳೂ, ನಾನಾ ಸೊಂಟಗಳಿಗೊಪ್ಪುವ ಚರ್ಮದ ಪಟ್ಟಿಗಳೂ, ಮಳೆಗಾಲದಲ್ಲಿ ಮಾತ್ರ ಮಾರಾಟವಾಗುವ ರಬ್ಬರ್ ಬೂಟುಗಳೂ, ಯಾವ ಗೋಡೆಗೂ ತೂಗಹಾಕಲು ಬರುವ ದೀಪಗಳೂ ಇವೆ. ಎಲ್ಲಕ್ಕಿಂತ ನಾನು ಆ ದೀಪಗಳ ಕಡೆಗೆ ಹೆಚ್ಚು ಒಲಿದಿದ್ದೇನೆ. ಅವುಗಳ ರಚನೆ, ಅವು ಕೊಡುವ ಪ್ರಕಾಶ– ಇದನ್ನು ನೋಡಿ ಮೆಚ್ಚಿದುದಲ್ಲ, ಆ ದೀಪಗಳ ಹುರುಪನ್ನು ನೋಡಿ ಮೆಚ್ಚಿದ್ದೇನೆ. ಗೋಡೆಯಿಂದ ತೆಗೆದು ನೆಲದಲ್ಲಿಟ್ಟು ಅರ್ಧನಿಮಿಷ ಆಚೆ ನೋಡಿದರೆ ಒಡೆವುವು; ಕೈಯಲ್ಲಿ ಹಿಡಿದು ಒಂದು ಕೊಠಡಿಯಿಂದ ಇನ್ನೊಂದು ಕೊಠಡಿಗೆ ಹೋಗುವಾಗ, ಹೊಸ್ತಿಲು ದಾಟುವಲ್ಲಿ ಪುಟಕ್ಕನೆ ನೆಗೆದು ಬಿದ್ದು ಒಡೆವುವು; ಚಿಕ್ಕ ಮಕ್ಕಳು ಅವುಗಳ ಕಡೆಗೇ ದೃಷ್ಟಿನೆಟ್ಟು ನೋಡಿದರೆ ಹಾರಿ ಒಡೆವುವು; ಒಂದು ರಾತ್ರೆ ಅವುಗಳಿಗೆ ಮುಟ್ಟದೆ, ಗೋಡೆಯಲ್ಲಿ ಇಟ್ಟಲ್ಲೆ ಇರಿಸಿಯೂ ನೋಡಿದೆ. ಮರುದಿನ ಬೆಳಿಗ್ಗೆ ಬರುವಾಗ ಕೆಳಗೆ ಬಿದ್ದು ಚೂರಾಗಿತ್ತು!

ಹಿಂದಿನ ರಾತ್ರೆ ಸದ್ದಿಲ್ಲದೆ ಕೆಳಗಿಳಿದು, ನೆಲಕ್ಕೆ ತಲೆಬಡೆದು ಆತ್ಮಹತ್ಯ ಮಾಡಿಕೊಂಡಿದ್ದಿರಬೇಕೆಂದು ನೆನಸಿದೆ. ಹಾಗಾದರೆ, ನಮ್ಮ ಅಜಾಗ್ರತೆಯಿಂದ ಅವು ಒಡೆವುದಲ್ಲ! ಜಪಾನ್ ದೀಪಗಳು, ಜಪಾನ್ ಸೈನಿಕರಂತೇ ಹುರುಪಿನಿಂದ ನೆಗೆದು ಒಡೆವುವು; ಇತರರು ಕೊಲ್ಲದಿದ್ದರೆ, ತಾವೇ ಆತ್ಮಹತ್ಯ ಮಾಡಿಕೊಳ್ಳುವುವು. 'ಹರಿಕಿರಿ'ಯು ಆ ದೀಪಗಳಿಗೂ ಒಂದು ಧರ್ಮವಾಗಿದೆ– ಎಂದು ಖಚಿತವಾಯಿತು." (ಪು.೧–೨)

ಇಂತಹ ಅತ್ಯಂತ ನಾಜೂಕಾದ, ಅಕಾರಣವಾಗಿ 'ಹರಿಕಿರಿ' ಮಾಡಿಕೊಳ್ಳುವ ಜಪಾನ್ ದೀಪಗಳಿಂದ ಉಂಟಾದ ಆರ್ಥಿಕ ನಷ್ಟ, ಆ ದೀಪಗಳ ಆತ್ಮಹತ್ಯೆಗೋ, ಹತ್ಯೆಗೋ ಕಾರಣಕರ್ತರಾದ ಮನೆಯವರ ಒಗ್ಗಟ್ಟು, ದಿನೇದಿನೇ ಅದರ ಬೆಲೆ ಏರಿಸುವ ಅಂಗಡಿಯಾತನ ಧರ್ಮಗಳನ್ನು ವಿನೋದ ಮತ್ತು ವಿಡಂಬನೆಗಳ ನೆಲೆಯಲ್ಲಿ ಕತೆ ಮುಂದಿಡುತ್ತದೆ.

ವ್ಯಾಪಾರ, ವ್ಯಾಪಾರಧರ್ಮದ ಭಾಗವಾದ ಜಾಹೀರಾತು, ಗ್ರಾಹಕ, ವ್ಯಾಪಾರಿ–ಗ್ರಾಹಕರ ನಡುವೆ ಬೆಳೆಯುವ ಅನಿವಾರ್ಯ ಸಂಬಂಧಗಳ ವಿವಿಧ ವಿನ್ಯಾಸಗಳು, ಜನರ ವಿಕ್ಷಿಪ್ತ ಸ್ವಭಾವಗಳು ಮುಂತಾದುವು ಬಹುಭಾಷಾವಿಶಾರದ, ಬೇಕಾಗಿದೆ, ಕೆಲೆಂಡರ್ ಬೇಟೆ ಈ ಕತೆಗಳಲ್ಲಿ

ಅನಾವರಣಗೊಂಡಿವೆ. ಅಮಾಯಕ ವ್ಯಕ್ತಿಗಳನ್ನು ವ್ಯವಹಾರ ಚತುರರು ಮೋಸಗೊಳಿಸುವ ಬಗೆ **ಗೀಳಿ, ಜನರೆಲ್ಲ ಕುರಿಗಳು** ಸಂತಹ ಕತೆಗಳಲ್ಲಿ ಮೂಡಿಬಂದಿವೆ. ಇವರ ಅನೇಕ ಕತೆಗಳ ನಿರೂಪಕ ಕತೆಯೊಳಗಿನ ಪ್ರಮುಖ ಪಾತ್ರವೂ ಆಗಿದ್ದು, ಆತ ತನ್ನ ಮುಗ್ಧತೆಯಿಂದ ಇಲ್ಲವೆ ಅತ್ಯುತ್ಸಾಹ ತೋರುವ ಭರದಲ್ಲಿ ಪೆದ್ದನಾಗುವ ಬಗೆ ಹಲವು ಕತೆಗಳಲ್ಲಿ ಪುನರಾವರ್ತನೆಗೊಳ್ಳುತ್ತದೆ. ಈ ತಂತ್ರವು ಪಂಜೆಯವರ ಆರಂಭದ ಕತೆಗಳ ಸಾಮಾನ್ಯ ಲಕ್ಷಣ ಎಂಬುದನ್ನೂ ನಾವು ನೆನಪಿಸಿಕೊಳ್ಳಬಹುದು. ಅದರ ಮುಂದುವರಿಕೆ ಎಂಬಂತೆ ಕುಡ್ಪಿಯವರ **ಚಿಕ್ಕಪ್ಪನ ಇರ್ಖಿಚೆಯರ್** ಕತೆ ಇದೆ. ಪಂಜೆಯವರ **ನನ್ನ ಚಿಕ್ಕತಾಯಿ, ನನ್ನ ಚಿಕ್ಕತಂದೆ, ನನ್ನ ಚಿಕ್ಕತಂದೆಯವರ ಉಯಿಲು** ಮುಂತಾದ ಕತೆಗಳ ನೆರಳು ಇಲ್ಲೂ ಮುಂದುವರಿದಂತೆ ಕಾಣುತ್ತದೆ. ಈ ಹೋಲಿಕೆ ಕೇವಲ ಶೀರ್ಷಿಕೆಗೆ ಸಂಬಂಧಿಸಿದಂತೆ ಮಾತ್ರ ಅಲ್ಲ, ಏನನ್ನೋ ಮಾಡಹೋಗಿ ಪೆಕರನಾಗುವಿಕೆಯಲ್ಲಿ, ಕತೆಯೊಳಗೆ ಹಾಸುಹೊಕ್ಕಾಗಿ ಬರುವ ಹಾಸ್ಯ ಮತ್ತು ವಿಡಂಬನೆಯಲ್ಲೂ ಈ ಹೋಲಿಕೆ ಎದ್ದು ಕಾಣುತ್ತದೆ.

ಈ ಸಂಕಲನದ **ಪಾಕೀಟುಗಳ ಪರ್ಯಾಯ** ಕತೆಯು ಉಲ್ಲೇಖಿಸಬೇಕಾದ ಇನ್ನೊಂದು ಕತೆಯಾಗಿದೆ. ಗೆಳೆಯರಿಬ್ಬರ ರೇಲ್ವೆ ಪ್ರಯಾಣದಲ್ಲಿ ಪಯಣಿಗನಾಗಿ ಮೆಜೀಷಿಯನ್ ಸೇರಿಕೊಂಡ ಕ್ಷಣದಿಂದ ಅವರ ಪ್ರಯಾಣಕ್ಕೆ (ಕತೆಗೆ) ರಂಗೇರುತ್ತದೆ. ಆತನ ಒಂದೊಂದು ಕೈಚಳಕಗಳಿಗೂ ಬೆರಗು, ಭಯ, ಕುತೂಹಲ ಮತ್ತು ಆತಂಕಗಳನ್ನು ನಿರೂಪಕನ ಗೆಳೆಯ ತೋರುತ್ತಿರುತ್ತಾನೆ. ನಿಗದಿತ ನಿಲ್ದಾಣದಲ್ಲಿ ಗೆಳೆಯರು ಇಳಿದು, ರೈಲು ಚಲಿಸತೊಡಗಿದಾಗ, ಮೊದಲ ಬಾರಿಗೆ ಮೆಜೀಷಿಯನ್‌ನ ಆತಂಕಿತ ನೋಟ ಮತ್ತು ಭಾವ ನಿರೂಪಕನನ್ನು ಅಚ್ಚರಿಗೊಳಿಸುತ್ತದೆ. ಕತೆಯ ಮುಖ್ಯ ತಿರುವು ಇದು. ಪಾಕೀಟು (ಪರ್ಸ್) ಈ ಕತೆಯ ತಿರುವಿನ ಮೂಲ ಕಾರಣ. ಕತೆಯಲ್ಲಿ ಇದು ಬೇರೆ ಬೇರೆ ನೆಲೆಗಳಲ್ಲಿ ಜರುಗುತ್ತದೆ. ಮೊದಲನೆಯದು ಗೆಳೆಯನ ಪರ್ಸ್ ಅನ್ನು ನಿರೂಪಕನ ಜೇಬಿನಿಂದ ಮೆಜೀಷಿಯನ್ ತೆಗೆದು ಕೊಟ್ಟ ಸಂದರ್ಭ. ಎರಡನೆಯದು ಮೆಜೀಷಿಯನ್‌ನ ಅರಿವಿಗೆ ಬರದಂತೆ ಆತನ ಪರ್ಸ್ ಕದ್ದ ನಿರೂಪಕನ ಗೆಳೆಯನ ಕೈಚಳಕ. ಮೂರನೆಯದು ಗೆಳೆಯ ಕದ್ದ ಪರ್ಸ್ ಅನ್ನು ಹುಡುಕಿ ತೆಗೆದು ತನ್ನ ಜೊತೆ ಒಯ್ದು ಸೂಪಕ ಮತ್ತು ಕೊನೆಯದಾಗಿ ನಿರೂಪಕನ ಕೈಚಳಕ ನೋಡಿ ಮೆಚ್ಚುವ ಬದಲು ಆ ಪರ್ಸ್ ಅನ್ನು ಮೆಜೀಷಿಯನ್‌ಗೆ ತಲುಪಿಸುವ ವ್ಯವಸ್ಥೆ ಮಾಡುವ ಆತನ ಮಡದಿ ಮೀರೆ–'ಇವುಗಳಲ್ಲಿ ಯಾರ ಕೈಚಳಕ ಹೆಚ್ಚು ಮಹತ್ವದ್ದು' ಎಂದು ಕೇಳಿಕೊಳ್ಳುವಂತೆ ಮಾಡುವ ಈ ಕತೆ, ತನ್ನ ಸರಳತೆ, ವಿನೋದ ಗುಣದ ಜೊತೆಗೇ ನೈತಿಕ ಮೌಲ್ಯಗಳ ಪ್ರತಿಪಾದನೆಯತ್ತ ಒಲವು ತೋರಿರುವುದು ಸ್ಪಷ್ಟ.

ಸಂಕಲನದ ಉಳಿದ ಕತೆಗಳು ಕತೆ, ಹರಟೆ, ಪ್ರಬಂಧ ಇವುಗಳ ನಡುವೆ ಓಡಾಡುವ ರಚನೆಗಳಾಗಿವೆ. ಕುಡ್ಪಿಯವರ ವಿನೋದಗುಣ, ಹಾಸ್ಯಪ್ರಜ್ಞೆ ಮತ್ತು ವಿಡಂಬನೆಯ ಚುರುಕು ಕತೆಗಳಲ್ಲಿ ಅಲ್ಲಲ್ಲಿ ಓದುಗರ ಗಮನವನ್ನು ಸೆಳೆಯುತ್ತದೆ. ಕೆಲವು ಕಥೆಗಳಲ್ಲಿ ಒತ್ತಾಯಪೂರ್ವಕವಾಗಿ ಇವು ಬಂದಂತೆ ಕಂಡುಬರುವುದೂ ಇದೆ. **ಮೀರೆ ಮತ್ತು ನಾನು**

ಕಥಾಸಂಕಲನದ ಜೊತೆ ಇದನ್ನು ಹೋಲಿಸಲಾಗುವುದಿಲ್ಲ. ಇವುಗಳಲ್ಲಿ ಕೆಲವು ಲೇಖಕರ ಆರಂಭಿಕ ರಚನೆಗಳೂ, ಇನ್ನು ಕೆಲವು ಪತ್ರಿಕೆಯ ಖಾಲಿ ಪುಟಗಳನ್ನು ತುಂಬಬೇಕಾದ ಜರೂರಿನ ಹಿನ್ನೆಲೆಯಲ್ಲಿ ರಚಿತವಾದವುಗಳೂ ಆಗಿದ್ದಿರಬೇಕು.

**ಪಂಡಿತನ ಪಿಟೀಲು ಮತ್ತು ಇತರ ಕತೆಗಳು** (೧೯೫೫): ಒಂದಾಣೆ ಮಾಲೆಯಲ್ಲಿ ಪ್ರಕಟವಾದ, ಒಟ್ಟು ಹದಿನೇಳು ಪುಟಗಳ ವ್ಯಾಪ್ತಿಯ ಈ ಸಂಕಲನದಲ್ಲಿ ಏಳು ಕತೆಗಳಿವೆ. ಇವುಗಳನ್ನು ಸ್ಥೂಲವಾಗಿ ಎರಡು ಗುಂಪು ಮಾಡಬಹುದು. ಮೊದಲ ಗುಂಪಿನಲ್ಲಿ ಕೃಪಣರು ಇಲ್ಲವೆ, ಕೃಪಣರನ್ನು ಮೋಸ ಮಾಡುವವರ ಕುರಿತು ಮಾತನಾಡುವ ಕತೆಗಳಿವೆ. ಎರಡನೆಯ ಗುಂಪಿನಲ್ಲಿ ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ಕಂಡುಬರುವ ಚೋರರು ಮತ್ತು ಅವರನ್ನು ಅತ್ಯಂತ ಜಾಣ್ಮೆಯಿಂದ ಪತ್ತೆಹಚ್ಚುವಲ್ಲಿ ಯಶಸ್ವಿಯಾಗುವವರನ್ನು ಕುರಿತ ಕತೆಗಳಿವೆ. **ಪಂಡಿತನ ಪಿಟೀಲು** ಮತ್ತು **ಋಣಸಂದಾಯ** ಮೊದಲ ಗುಂಪಿಗೂ, **ಕಳ್ಳಕತ್ತರಿ, ನಿಜವಾದ ಉತ್ತರಾಧಿಕಾರಿ, ಹುಲ್ಲಿನಿಂದ ಮಾಡಲ್ಪಟ್ಟ ಹುಲುಕಳ್ಳ, ಹಿಟ್ಟು ಕದ್ದವರಾರು?** ಮತ್ತು **ಕುರುಡನ ಚಾತುರ್ಯ** ಎರಡನೆಯ ಗುಂಪಿಗೂ ಸಲ್ಲುತ್ತವೆ. ನಿಜವಾದ ಕಳ್ಳನನ್ನು ಪತ್ತೆಹಚ್ಚುವ ಮಾವಿನ ತೋಟದ ಮಾಲಿಕ, ದಿವಂಗತ ಶ್ರೀಮಂತನ ಗೆಳೆಯ, ಸೇನೆಯ ಮೇಲಧಿಕಾರಿ, ವರ್ತಕ ಮತ್ತು ಕುರುಡರು ಅನುಕ್ರಮವಾಗಿ ಎರಡನೆಯ ಗುಂಪಿನ ಕತೆಗಳಲ್ಲಿದ್ದು, ಅವರ ಚಾತುರ್ಯ ಓದುಗರ ಅಚ್ಚರಿ ಮತ್ತು ಮೆಚ್ಚುಗೆಯನ್ನು ಗಳಿಸುತ್ತವೆ. ಇಂತಹ ಕತೆಗಳನ್ನು ಓದುಗರು ಹೇಗೆ ಸ್ವೀಕರಿಸುತ್ತಾರೋ ಎಂಬ ಅಳುಕು ಕುಡ್ವಿಯವರನ್ನು ಕಾಡಿದಂತಿದೆ. ಆದುದರಿಂದ ಸಂಕಲನದಲ್ಲಿ ಅವರು ಕೊಡುವ ಟಿಪ್ಪಣಿ ಹೀಗಿದೆ-

"....ಆ ಕೃಪಣನಿಗೆ ಗಂಟುಬಿದ್ದಂಥವನ ವಿಷಯ ತಾನೂ ಎಚ್ಚರಿಕೆಯಿಂದಿರಬೇಕೆಂಬ ಪಾಠವೂ ಇದೆ. . . . . ಹೀಗೆ ಒಂದೊಂದು ವಿಚಿತ್ರ ಕಳ್ಳತನದ ರೀತಿಯೊಡನೆ ವಿವಿಧ ಸ್ವಭಾವಗಳನ್ನು ವಿಶದೀಕರಿಸುತ್ತವೆ. ಕಳ್ಳ-ಸುಳ್ಳರ ಕಥೆಗಳಾದರೂ ಅಪ್ರತ್ಯಕ್ಷವಾಗಿ ಕೂಡ ಓದುಗನ ಮನಸ್ಸಿನ ಮೇಲೆ ದುಷ್ಪರಿಣಾಮವುಂಟಾಗಬಾರದೆಂಬುದನ್ನು ತಿಳಿದು ಜಾಗರೂಕತೆಯಿಂದ ಹೆಕ್ಕಿ ಕೊಟ್ಟಿರುವೆವು." ಎಂದರೆ ಈ ಕತೆಗಳು ಕಳ್ಳತನವನ್ನು ಪ್ರಚೋದಿಸುವ ಉದ್ದೇಶವವುಗಳಲ್ಲ; ಬದಲಾಗಿ ಮನುಷ್ಯ ಸ್ವಭಾವದ ವಿಭಿನ್ನ ಮುಖಗಳನ್ನು ಅನಾವರಣಗೊಳಿಸುವ ಉದ್ದೇಶದವು ಎಂದು ಅವರು ಸ್ಪಷ್ಟಪಡಿಸುತ್ತಾರೆ.

ಕುಡ್ವಿಯವರ **ಜಾತಕ ಪಠನ ಮತ್ತು ಇತರ ಕತೆಗಳು** (೧೯೫೬) ಎಂಬುದೂ ಒಂದಾಣೆ ಮಾಲೆಯಲ್ಲಿ ಪ್ರಕಟವಾದ ಪುಟ್ಟ ಸಂಕಲನವಾಗಿದ್ದು, ಇದರಲ್ಲಿ ಒಟ್ಟು ಮೂರು ಕತೆಗಳಿವೆ. **ಈ ಯುಗದ ಶೇಂಕಾರ-ಕುಮಾರ** (೧೯೫೬) ಎಂಬುದೂ ಒಂದಾಣೆ ಮಾಲೆಯಲ್ಲಿ ಪ್ರಕಟವಾದ ಇನ್ನೊಂದು ಕತೆ. ಇವುಗಳು ಸಾಧಾರಣವಾದ ಕತೆಗಳು.

## ನಾಟಕ ಕೃತಿಗಳು

ಕುಡ್ಪಿ ವಾಸುದೇವ ಶೆಣೈ ಅವರದು ಮೂಲತಃ ಸರಸ, ವಿನೋದ ಮತ್ತು ವಿಡಂಬನೆಯ ಮನೋಧರ್ಮ. ಪದಗಳ ಜೊತೆಗಿನ ಆಟ ಅವರಿಗೆ ಪ್ರಿಯವಾದ ಇನ್ನೊಂದು ಅಂಶ. ಇವುಗಳನ್ನು ಅವರು ನಾಟಕೀಯ ಮತ್ತು ಚುರುಕಾದ ಸಂಭಾಷಣೆಗಳ ಮೂಲಕ ಕಟ್ಟಿಕೊಡುತ್ತಾರೆ. ಅವರ ಮೀರಾ ಕತೆಗಳಲ್ಲಂತೂ ಸಂಭಾಷಣೆಯೇ ಜೀವಾಳವಾಗಿದ್ದು, ಆ ಭಾಗಗಳು ಕತೆಗಳ ಯಶಸ್ಸಿಗೆ ಕಾರಣವಾಗಿವೆ. ಮೇಲೆ ಗುರುತಿಸಿದ ಅಂಶಗಳು ನಾಟಕಕೃತಿಯ ಜೀವಾಳ. ಅಂತೆಯೇ ಅವರ ನಾಟಕಗಳು ಪಠ್ಯವಾಗಿ ಮತ್ತು ರಂಗಪ್ರಯೋಗವಾಗಿ ಯಶಸ್ವಿಯಾಗುವ ಗುಣಗಳನ್ನು ಹೊಂದಿವೆ. **ಪುರುಷವಧು** (೧೯೩೬) ಅವರ ಮೊದಲ ಪ್ರಕಟಿತ ನಾಟಕ. ಐವತ್ತರ ದಶಕದಲ್ಲಿ ಅವರ **ಬಾಬಿಗೆ ಬಾಸಿಂಗ, ಸತ್ಯವಂತ ಬಾಬಿ, ನಾರೀಶ್ವರರು, ಚುನಾವಣೆ ಅರ್ಥಾತ್ ಬನಾವಣೆ** ಮತ್ತು **ನಾವು ಸಾಹುಕಾರ ಕುಲದವರು** ಎಂಬ ಐದು ಕಿರುನಾಟಕಗಳು ಪ್ರಕಟವಾಗಿವೆ. **ಸನ್ಯಾಸಿಯ ಗೊಂಗಡಿ** ಎಂಬ ಅವರ ಇನ್ನೊಂದು ನಾಟಕ ೧೯೯೬ ರಲ್ಲಿ ಪ್ರಕಟವಾಗಿದೆ. **ವರ್ತಕ ವಿಲಾಸ** ಮತ್ತು **ಸೈತಾನನೊಡನೆ ಕರಾರು** ಇನ್ನೂ ಅಪ್ರಕಟಿತ ರೂಪದಲ್ಲೇ ಉಳಿದಿರುವ ಅವರ ನಾಟಕಗಳು.

ಕುಡ್ಪಿಯವರ ಹೆಚ್ಚಿನ ನಾಟಕಗಳ ಮೂಲ ಮನೋಧರ್ಮ ಹಾಸ್ಯ ಮತ್ತು ವಿಡಂಬನೆ. ಈ ನಾಟಕಗಳಲ್ಲಿ ವಿಡಂಬನೆಗೆ ಒಳಗಾಗುವವರೆಂದರೆ, ಯುವಕರು, ವರ್ತಕರು, ಸನ್ಯಾಸಿಗಳು, ಕಳೆದುಹೋದ ಶ್ರೀಮಂತಿಕೆಯ ಅಮಲಿನಲ್ಲಿ ನಿಷ್ಕ್ರಿಯರಾದವರು, ಪತ್ನೀದಾಸರು ಹೀಗೆ ಹಲವರು. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ಆಚೆ–ಈಚಿನ ದಶಕಗಳ ಕಾಲದ ಹಲವು ಮೌಲ್ಯಗಳು ಮತ್ತು ಜೀವನಕ್ರಮಗಳು ಈ ನಾಟಕಗಳಲ್ಲಿ ಕುಡ್ಪಿಯವರ ವಿಡಂಬನೆಗೆ ಒಳಗಾಗಿವೆ. ಆದುದರಿಂದ ಈ ನಾಟಕಗಳ ಓದು, ಆ ಕಾಲದ ಸಾಮಾಜಿಕ ಮತ್ತು ರಾಜಕೀಯ ವಿದ್ಯಮಾನಗಳಿಗೆ ಕೈಗನ್ನಡಿಯಾಗುತ್ತದೆ.

**ಬಾಬಿಗೆ ಬಾಸಿಂಗ** (೧೯೫೪): ಈ ನಾಟಕದ ನಾಯಕ ಬಾಬಿ ಮೂವತ್ತರ ಅವಿವಾಹಿತ ತರುಣ. ನಾಟಕದ ಆರಂಭದಲ್ಲೇ ಹಯವದನ ಎಂಬ ವ್ಯಾಪಾರಿಯ ಮಗಳೊಂದಿಗೆ ಬಾಬಿಯ ವಿವಾಹಕ್ಕೆ ಆತನ ಚಿಕ್ಕಪ್ಪ ತನ್ನ ಅನುಮತಿಯನ್ನು ನೀಡುತ್ತಾನೆ. ಹಾಗೂ ಅಳಿಯನನ್ನು ವಿವಾಹಕ್ಕೆ ಒಪ್ಪಿಸುವ ಜವಾಬ್ದಾರಿಯನ್ನು ಮಾವನಿಗೆ ಹೊರಿಸುತ್ತಾನೆ. ಇದರಿಂದ ಆರಂಭವಾಗುವ ಅಳಿಯನನ್ನು ಬೆನ್ನಟ್ಟುವ ಮಾವ ಮತ್ತು ಅದರಿಂದ ತಪ್ಪಿಸಿಕೊಳ್ಳಲು ಹೋರಾಡುವ ಅಳಿಯನ ಓಡಾಟವು, ಕಳ್ಳ ಪೊಲೀಸ್ ಆಟದಂತೆ ನಾಟಕದುದ್ದಕ್ಕೂ ಸಾಗುತ್ತದೆ. ವಾಸ್ತವದಲ್ಲಿ ಮಾವನಾಗಬೇಕಾದವ ತನ್ನ ಹುಡುಕಾಟ ಮಾಡುವುದು ತಾನು ಬಾಕಿ ಉಳಿಸಿರುವ ಹಣವಸೂಲಿಗೆ ಎಂದು ತಿಳಿದಿದ್ದ ಬಾಬಿಗೆ, ಆ ಹುಡುಕಾಟ ಕನ್ಯಾದಾನಕ್ಕೆ ಎಂದು ತಿಳಿದಾಗ ನಿರಾಳವಾಗುತ್ತದೆ. ಬಾಬಿಯ ಚಿಕ್ಕಪ್ಪ ಹೇಳುವಂತೆ ಬಾಬಿಯಲ್ಲಿದ್ದ ಮೂರು ಗುಣಗಳೆಂದರೆ, ಒಂದು, ಇಡೀದಿನ ತಿನ್ನುತ್ತಾ ಇರೋದು; ಎರಡು, ಯಾವ ಕೆಲಸವನ್ನೂ ಪೂರ್ಣ ಮಾಡದಿರುವುದು; ಮೂರು, ಎರಡು ತಿಂಗಳಿಗೊಮ್ಮೆ ವೃತ್ತಿ ಮತ್ತು ಜನಾಂಗ ಧ್ವಂಸ ಮಾಡುವ ರಾಮಬಾಣ ವಸ್ತುಗಳನ್ನು ನಿರ್ಮಿಸೋದು. ಓದುಗರಿಗೆ

ತಿಳಿಯುವ ಬಾಬಿಯ ಇನ್ನೊಂದು ಗುಣವೆಂದರೆ, ಹೇಳಿದ ಮಾತನ್ನು ಉಳಿಸಿಕೊಳ್ಳದಿರುವುದು. ನಾಟಕದ ಆರಂಭದಲ್ಲಿ ವರದಕ್ಷಿಣೆಯ ಅನಿಷ್ಟಗಳ ಬಗ್ಗೆ ಮಾತನಾಡುತ್ತ, ಅದನ್ನು ಉಗ್ರವಾಗಿ ವಿರೋಧಿಸುತ್ತಿದ್ದ ಬಾಬಿ, ಕೊನೆಯಲ್ಲಿ ವರದಕ್ಷಿಣೆಗೆ ಕೊರಳೊಡ್ಡುತ್ತಾನೆ. ಈ ನಿಲುವನ್ನು ಎಚ್ಚರಿಸುವ ಗೆಳೆಯನ ಮಾತಿಗೆ ಆತ ಕವಡೆ ಕಾಸಿನ ಬೆಲೆಯನ್ನೂ ನೀಡುವುದಿಲ್ಲ. ಎಂದರೆ ಆ ಮೂಲಕ ನವತರುಣರ ಚಿಂತನ ಕ್ರಮವನ್ನು ನಾಟಕವು ವಿಡಂಬಿಸುತ್ತದೆ.

ಮಾವನಿಗೆ ಬಾಬಿ ತನ್ನ ಅಳಿಯನಾಗುವುದಕ್ಕೆ ಅರ್ಹನೆನಿಸಿದ್ದು ಯಾವ ಕಾರಣಕ್ಕೆ ಎಂಬುದು ಇನ್ನೂ ವಿಶಿಷ್ಟವಾಗಿದೆ. ಈ ಬಾಬಿಯಲ್ಲಿ ಆತ 'ವಣಿಕಪತಿ'ಯ ಗುಣಧರ್ಮವನ್ನು ಕಾಣುತ್ತಾನೆ! ಅವುಗಳೆಂದರೆ–ಒಂದು, ಬಾಬಿ ಯಾರಿಗೋ ನೀಡಿದ್ದ ಐದು ರೂಪಾಯಿ ಸಾಲವನ್ನು ವಸೂಲಿ ಮಾಡುತ್ತಿದ್ದುದು; ಎರಡು, ತನ್ನಂಥ ನುರಿತ ವ್ಯಾಪಾರಿಗೇ ಕೊಡಬೇಕಾದ ಹದಿನೈದು ರೂಪಾಯಿಗಳನ್ನು ಕೊಡದೆ, ವರ್ಷಗಟ್ಟಲೆ ತಪ್ಪಿಸಿಕೊಂಡ ಬಾಬಿಯ ಚಾಕಚಕ್ಯತೆ; ಮೂರು, ಕೊಡಬೇಕಾದ ವರದಕ್ಷಿಣೆಗೆ ಹದಿನೈದು ರೂಪಾಯಿ ಸೇರಿಸಿ, ಅದರಿಂದ ಬಾಕಿ ಕಳೆದುಕೊಳ್ಳುವಂತೆ ಭಾವೀ ಮಾವನಿಗೆ ಸೂಚಿಸಿದ ಬಾಬಿಯ ಜಾಣ್ಮೆ. 'ವ್ಯಾಪಾರಿಗೆ ಒಳವಸೂಲಿ ಕಲೆ ಗೊತ್ತಿರಬೇಕು ಹೊರಪಾವತಿ ವಿಷಯ ಗೌಣ' ಎಂದು ಮಾವ ಅಳಿಯನಿಗೆ ಶಿಫಾರಸು ಮಾಡುತ್ತಾನೆ. ಒಟ್ಟು ಆರು ದೃಶ್ಯಗಳ ಇಪ್ಪತ್ತು ಪುಟ ವ್ಯಾಪ್ತಿಯ ಈ ನಾಟಕ ವಿನೋದಪ್ರಧಾನ ಗುಣವನ್ನು ಒಳಗೊಂಡಿದೆ.

**ಸತ್ಯವಂತ ಬಾಬಿ** (೧೯೫೫): ಇದು ಕೂಡಾ ಐದು ದೃಶ್ಯಗಳ ಇಪ್ಪತ್ತೊಂದು ಪುಟ ವ್ಯಾಪ್ತಿಯ ಕಿರುನಾಟಕ. ಇಲ್ಲಿಯ ಬಾಬಿ ಇಪ್ಪತ್ನಾಲ್ಕರ ತರುಣ; ವಿದ್ಯಾವಂತ ನಿರುದ್ಯೋಗಿ. ಗುಡಿಕೈಗಾರಿಕೆಯ ಹುಚ್ಚು ಹಿಡಿಸಿಕೊಂಡಾತ. ಅದಕ್ಕಾಗಿ ಚಿಕ್ಕಪ್ಪನಿಂದ ಐನೂರು ರೂಪಾಯಿ ತೆಗೆದುಕೊಂಡು, 'ಬುಲ್‌ಬುಲ್ ಎ ಬಸಂತ್' ಎಂಬ ಎಣ್ಣೆ, 'ಅತ್ತರ್ ಎ ಬಹ್ಮಾದ್' ಎಂಬ ಸೆಂಟ್ ಮತ್ತು 'ಮೊರೆಸಾನಿ ಸ್ನೋ'ಗಳನ್ನು ತಯಾರಿಸಿ ಕೈಸುಟ್ಟುಕೊಂಡವ. ಬಾಬಿಯು ತಯಾರಿಸಿದ ಎಣ್ಣೆ ಹಚ್ಚಿಕೊಂಡರೆ ಇದ್ದ ತಲೆಕೂದಲೂ ಉದುರುತ್ತದೆ; ಸೆಂಟ್ ಹಾಕಿದರೆ ತೊಟ್ಟ ಬಟ್ಟೆಗೂ ತೂತು ಬೀಳುತ್ತದೆ; ಇನ್ನು ಸ್ನೋ ಹಚ್ಚಿದರೆ ಕೆನ್ನೆ ಕಪ್ಪಾಗುತ್ತದೆ! ಇಂಥವನನ್ನು ಸುನೀಲನು ಚುನಾವಣೆಗೆ ನಿಂತ ತನ್ನ ತಂದೆಯ ಕಾರ್ಯದರ್ಶಿಯನ್ನಾಗಿ ಮಾಡುತ್ತಾನೆ. ಒಂದು ಪ್ರಾಮಾಣಿಕ ಚುನಾವಣಾ ಪ್ರಚಾರ ಭಾಷಣ ಬರೆಯಲು ಬಾಬಿಗೆ ಹೇಳಿದಾಗ, ಆತ ಬರೆದು ನೇರವಾಗಿ ಪತ್ರಿಕೆಗೆ ಕಳಿಸುತ್ತಾನೆ. ಆ ಭಾಷಣ ಸಾಂತಪ್ಪಯ್ಯನವರ (ಸುನೀಲನ ತಂದೆ) ಮಾನವನ್ನು ಹರಾಜು ಹಾಕುತ್ತದೆ. ಕೊನೆಗೆ ಅಲ್ಲಿಂದಲೂ ಬಾಬಿ ಪಲಾಯನ ಮಾಡಬೇಕಾಗುತ್ತದೆ.

ವಾಸ್ತವಿಕವಾಗಿ ನಾಟಕದಲ್ಲಿ ಮಹತ್ವದ ಎಳೆಯೇನೂ ಇಲ್ಲ. ಬಾಬಿ ಇಲ್ಲಿ ಅಮಾಯಕನಲ್ಲ; ಆದರ್ಶ ನಾಯಕನೂ ಅಲ್ಲ; ಹರೆಯದಲ್ಲಿ ಹಾದಿತಪ್ಪಿದ, ಜವಾಬ್ದಾರಿರಹಿತ ಸಮುದಾಯದ ಪ್ರತಿನಿಧಿ. ನಾಟಕದಲ್ಲಿ ಚುನಾವಣೆಯ ಸ್ವರೂಪ, ಪುಢಾರಿಗಳ ಕುತಂತ್ರಗಳ

ವಿಡಂಬನೆ ಇದೆ. ಅಂದಿನ ರಸ್ತೆಯ ದುರವಸ್ಥೆ, ನಗರಸಭೆಯ ನಿಷ್ಕ್ರಿಯತೆಗಳು ಸುನೀಲ ಮತ್ತು ನೀಲರಿಂದ ಟೀಕೆಗೆ ಒಳಗಾಗಿವೆ. ಕೊನೆಯಲ್ಲಿ ನೀತಿಯೊಂದು ಬಾಬಿಯ ಗೊಂದಲದ ಮೂಲಕ ಮೂಡಿಬರುತ್ತದೆ. "ಸತ್ಯ ಮಾತಾಡು ಎಂದು ಬೋಧನೆ ಕೊಡುತ್ತಾರೆ; ಸತ್ಯ ಮಾತಾಡಿದರೆ ಚಲ್ಲಣ ಸಹಿತವಾಗಿ ನುಂಗಿಬಿಡುವೆವೆಂದು ಬೆದರಿಕೆ ಹಾಕುತ್ತಾರೆ! ಹಾಗೆಂದು, ಸತ್ಯದ ಗೊಡವೆ ಬೇಡವೆಂತ ಸುಳ್ಳನ್ನು ಹೇಳತೊಡಗಿದರೆ, ಘಟಿಂಗ ಎಂದು ಬೈಯ್ದು, ಹರಿದುಬಿಡುತ್ತಾರೆ. ಹಾಗಾದರೆ, ಸತ್ಯ ಮತ್ತು ಸುಳ್ಳು ಇವೆರಡರ ನಡುವಿನ ಒಂದು ಭಾಷೆ ಕಲಿಯಬೇಕಾಯಿತು. ಆ ಭಾಷೆ ನಾನು ಕಲಿತಿಲ್ಲ–ಎಂದೇ ನನಗೀ ಗತಿ!" (ಪು.೨೧) ಎಂಬ ಬಾಬಿಯ ಮಾತುಗಳು ನಕ್ಕು ಮರೆತುಬಿಡುವಂಥವು ಅಲ್ಲ. ಇವು ಜನರ ಒಟ್ಟು ಮನೋಧರ್ಮದಲ್ಲಿನ ವಿಸಂಗತಿಗಳನ್ನು, ಬದುಕು ಸಹಜತೆಯಿಂದ ಕೃತಕತೆಯೆಡೆಗೆ ಸಾಗುವ ನೆಲೆಯನ್ನು ಸೂಚಿಸುತ್ತವೆ. ಅಷ್ಟೇ ಅಲ್ಲ, ಓರ್ವ ಅಪ್ರಬುದ್ಧ ತರುಣನು ನಾಟಕದ ಕೊನೆಯಲ್ಲಿ ಬದುಕಿನ ಸತ್ಯವನ್ನು ಗ್ರಹಿಸುವ ಮತ್ತು ತನ್ನಲ್ಲಿ ಅಳವಡಿಸಿಕೊಳ್ಳುವ ಕಡೆಗೆ ಚಲಿಸುತ್ತಾನೆ. ಇದಿಷ್ಟನ್ನೂ ಕೇವಲ ಇಪ್ಪತ್ತೊಂದು ಪುಟಗಳ ಚೌಕಟ್ಟಿನಲ್ಲಿ ಹಿಡಿದಿಟ್ಟ ಬಗೆ ವಿಶಿಷ್ಟವಾಗಿದೆ.

**ನಾವು ಸಾಹುಕಾರ ಕುಲದವರು (೧೯೫೯):** ಈ ನಾಟಕವೂ ಒಂದಾಣೆ ಮಾಲೆಯ ಪ್ರಕಟಣೆಯಾಗಿದ್ದು, ಒಂಬತ್ತು ಅಂಕಗಳ ಮೂವತ್ತೆರಡು ಪುಟಗಳನ್ನು ಒಳಗೊಂಡಿದೆ. ಶಾಲಾ ಸಮಾರಂಭಗಳಲ್ಲಿ ರಂಗಪ್ರಯೋಗದ ಉದ್ದೇಶದಿಂದ ರಚಿತವಾಗಿರುವ ಈ ನಾಟಕವು, ಎಳೆಯರಿಗೆ ನೀತಿಯೊಂದನ್ನು ಹೇಳುವ ಕಡೆ ಸಹಜವಾಗಿಯೇ ಆಸಕ್ತವಾಗಿದೆ. ನಾಟಕದಲ್ಲಿ ಬರುವ ಎರಡು ಕುಟುಂಬದ ಪುರುಷರೂ ತಮ್ಮ ಹಿಂದಿನ ತಲೆಮಾರಿನ ಶ್ರೀಮಂತಿಕೆಯ ನೆನಪಿನಲ್ಲೇ ವರ್ತಮಾನವನ್ನು ಕಳೆಯುವವರು; ಉಪವಾಸ ಇದ್ದರೂ ಹೊರದುಡಿಮೆಗೆ ತೆರಳುವುದು ತಮಗೆ ಅಪಮಾನವೆಂದು ಭಾವಿಸಿದವರು; ಹೆಂಡತಿಯರ ದುಡಿಮೆಯಲ್ಲಿ ಜೀವನ ಸಾಗಿಸುವವರು. ಇಂತಹ ಗೃಹಸ್ಥರನ್ನು ಅವರ ಮಡದಿಯರು ಚಂದ್ರಾ ಮತ್ತು ಆಕೆಯ ಗಂಡ ಪ್ರಭಾಕರನ ಪ್ರಯತ್ನಗಳಿಂದ ಸರಿದಾರಿಗೆ ತರುವುದೇ ನಾಟಕದ ವಸ್ತು. 'ನಾವು ಸಾಹುಕಾರ ಕುಲದವರು' ಎಂದು ಹಿಂದೆ ತಾನು ಆಗಾಗ್ಗೆ ಹೇಳುತ್ತಿದ್ದ ಮಾತು ಮಾಧವ್ಜಿಗೆ ಈಗ ಸಂಕೋಚವನ್ನು ಉಂಟುಮಾಡುತ್ತದೆ. ಆತನ ಮಡದಿ ಶೀಲಾ "ಈಗಲೂ ಅದೇ ಕುಲವಲ್ಲವೇ" ಎಂದು ರೇಗಿಸಿದಾಗ, "ಶೀಲಾ, ನನ್ನ ಅಂದಿನ ಮಾತುಗಳು ನನಗೇ ನಾಚಿಕೆ ಮತ್ತು ಬೇಸರವನ್ನುಂಟುಮಾಡುವುದಾದರೆ, ಹಲವು ವರ್ಷಗಳಿಂದ ನಿತ್ಯವೂ ಕೇಳಿ ಕೇಳಿ – ಆಮೇಲೆಯೂ ನನ್ನನ್ನು ಸಲಹಿದ್ದ ನಿನ್ನ ಸ್ಥೈರಣೆಗೆ ಎಣೆಯುಂಟೇ?" (ಪು.೩೨) ಎಂದು ಪಶ್ಚಾತ್ತಾಪದಿಂದ ನುಡಿಯುವಷ್ಟು ಬದಲಾಗುತ್ತಾನೆ. ಹೀಗೆ ನಾಟಕದ ಕೊನೆಯಲ್ಲಿ ಆಲಸಿಗಳಾದ ಗೃಹಸ್ಥರು ದುಡಿಮೆಗಿಳಿದು, ದುಡಿಮೆಯ ಮಹತ್ವವನ್ನು ಅರಿತು ಗೌರವಾನ್ವಿತ ಬದುಕನ್ನು ನಡೆಸುವುದು ನಾಟಕದ ಮಹತ್ವವಾಗಿದೆ.

ಈ ನಾಟಕದ ಕುರಿತು ಕುಡ್ವಿಯವರು ಹೀಗೆ ಹೇಳಿದ್ದಾರೆ, "ಪ್ರಹಸನವು ಪ್ರದರ್ಶಿಸಲ್ಪಡುವ ಸ್ಥಳ, ವಾತಾವರಣ, ಪಾತ್ರವಹಿಸುವವರ ಇತಿಮಿತಿಗಳು ಇವುಗಳನ್ನು ಮನಸ್ಸಿನಲ್ಲಿಟ್ಟು, ಅದೊಂದು ತರದ ನಿರ್ಬಂಧದಲ್ಲಿ ಇದನ್ನು ಬರೆದುದಾಗಿದೆ. ಏಕಾಂಕ ಪ್ರಹಸನಗಳು ಸಣ್ಣ ಕಥೆಯಂತಿರಬೇಕು, ಪ್ರಹಸನಗಳಲ್ಲಿ ಕ್ಲಿಷ್ಟ ಪದಗಳಿಗಿಂತಲೂ ಲಘು ಶಬ್ದಗಳೇ ಇರುವುದರಿಂದ ಪ್ರಹಸನದ ಸೊಬಗು ಹೆಚ್ಚುವುದು ಮತ್ತು ಹೆಚ್ಚು ಜನರು ಅದನ್ನು ತಿಳಕೊಳ್ಳುವರು ಎಂದು ನನ್ನ ಅಭಿಪ್ರಾಯ. ಮನೋರಂಜನೆಯು ಮುಖ್ಯ ಉದ್ದೇಶವಾಗಿದ್ದರೂ, ಇಂತಹ ಲಘು ಪ್ರಹಸನಗಳು ಒಂದು ಸಂದೇಶ ಅಥವಾ ಗಂಭೀರವಾದ ಸೂಚನೆಯನ್ನೂ ಒಳಗೊಂಡಿದ್ದರೆ ಒಳ್ಳೆಯದೆಂದೂ ಅನಿಸಿತು" (ಮುನ್ನುಡಿ). ಈ ಮಾತುಗಳನ್ನು ಗಮನಿಸಿದರೆ, ಕುಡ್ವಿಯವರು ಬರೆವಣಿಗೆಯನ್ನು ಎಷ್ಟು ಗಂಭೀರವಾಗಿ ಸ್ವೀಕರಿಸಿದ್ದರು ಎಂಬುದು ತಿಳಿಯುತ್ತದೆ. ಒಂದು ನಿರ್ದಿಷ್ಟ ಉದ್ದೇಶ ಇಟ್ಟುಕೊಂಡು ಕೃತಿ ರಚಿಸಿದರೆ, ಲೇಖಕನ ಸ್ವಾತಂತ್ರ್ಯಕ್ಕೆ ಅಡ್ಡಿಯಾಗುವ ಅನುಮಾನವನ್ನೂ ಅವರು ಮುಂದೆ ಎತ್ತುತ್ತಾರೆ. ಏಕೆಂದರೆ ವಿದ್ಯಾರ್ಥಿಗಳ ವಯಸ್ಸು, ಶಾಲಾ ಸಮಾರಂಭಗಳಲ್ಲಿ ಇರುವ ಅವಕಾಶ ಮತ್ತು ಮಿತಿಗಳನ್ನು ನೆನಪಲ್ಲಿ ಇರಿಸಿಕೊಂಡು, ಪಾತ್ರ, ಪೋಷಾಕು, ಸನ್ನಿವೇಶಗಳ ಸಂಖ್ಯೆ ಇವುಗಳನ್ನು ಗಮನದಲ್ಲಿರಿಸಿ ನಾಟಕವನ್ನು ಹೀಗೆ ರೂಪಿಸಲಾಗಿದೆ ಎಂದೂ ಅವರು ಸೂಚಿಸುತ್ತಾರೆ. ಆದಾಗ್ಯೂ, **ನಾವು ಸಾಹುಕಾರ ಕುಲದವರು** ನಾಟಕ ಪ್ರಯೋಗವಾಗಿ ಯಶಸ್ವಿಯಾಯಿತೇ ಎಂಬುದು ಅನುಮಾನ. ಇದು ಮಕ್ಕಳ ನಾಟಕ ಎನ್ನುವುದಕ್ಕಿಂತ ವಯಸ್ಕರ ನಾಟಕ ಎನಿಸುತ್ತದೆ. ಹಾಗೂ ಇದು ಅವರ ಇತರ ಕಿರು ನಾಟಕಗಳಿಗಿಂತ ಕೊಂಚ ಪೇಲವವಾದ ನಾಟಕವಾಗಿದೆ.

**ನಾರೀಶ್ವರರು (೧೯೫೪):** ಇದು ಕೂಡ ಒಂದು ಕಿರುನಾಟಕ. ಇದು ವಿನೋದ ಪ್ರಧಾನವಾದ ನಾಟಕ. ನಾಟಕದಲ್ಲಿ ಎರಡು ಜೋಡಿ ದಂಪತಿಗಳಿದ್ದು, ಅದರಲ್ಲಿ ಒಂವರಲ್ಲಿ ಹೆಂಡತಿಗೆ ಹೆದರುವ ಗಂಡ, ಇನ್ನೊಂದರಲ್ಲಿ ಗಂಡನಿಗೆ ಹೆದರುವ ಹೆಂಡತಿ ಕಂಡುಬರುತ್ತಾರೆ. ಆಕಸ್ಮಾತ್ ಹೆಂಡತಿಗೆ ಹೆದರುವ ಗಂಡ ಮತ್ತು ಗಂಡನಿಗೆ ಹೆದರುವ ಹೆಂಡತಿಯರ ಸ್ವಭಾವ ಬದಲಾದರೆ ಏನಾದೀತು ಎಂಬುದನ್ನು ಇದರಲ್ಲಿ ನಾಟಕೀಕರಿಸಲಾಗಿದೆ. ಕೊನೆಗೆ ಹೇಳಿಕೊಟ್ಟ ಪಾಠ ಬದುಕಿಗೆ ಎಂದೂ ಪ್ರಯೋಜನಕ್ಕೆ ಬರುವುದಿಲ್ಲ, ಅವರವರ ವ್ಯಕ್ತಿತ್ವವನ್ನು ಯಾರಿಂದಲೂ ನಾಶ ಮಾಡಲು ಸಾಧ್ಯವಿಲ್ಲ ಎಂಬ ಸಾರಾಂಶವನ್ನು ನಾಟಕವು ನೀಡುತ್ತದೆ. ಇಂತಹ ಕಿರುನಾಟಕಗಳ ಮಿತಿ ಏನೇ ಇರಲಿ, ಇವು ಅಂದು ಓದುಗವರ್ಗವನ್ನು ನಿರ್ಮಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಂತೂ ನಿಜ.

**ಸನ್ಯಾಸಿಯ ಗೊಂಗಡಿ (೧೯೯೬):** ಇದು ಕುಡ್ವಿಯವರ ಕಾಲಾನಂತರ ಪ್ರಕಟವಾದ ನಾಟಕ. ಎಂದರೆ ನಾಟಕ ರಚಿತವಾದ ಕಾಲಕ್ಕೂ ಅದು ಪ್ರಕಟವಾದ ಕಾಲಕ್ಕೂ ನಾಲ್ಕು ದಶಕಗಳಷ್ಟು ಅಂತರವಿದೆ. ಅಷ್ಟೇ ಅಲ್ಲ, ಇತರ ನಾಟಕಗಳಿಗಿಂತ ದೊಡ್ಡ ಚೌಕಟ್ಟನ್ನು ಹೊಂದಿದ ದೀರ್ಘವಾದ ನಾಟಕವೂ ಆಗಿದೆ. ಇದು ಕೂಡಾ ಶುದ್ಧ ಹಾಸ್ಯಪ್ರಧಾನವಾದ ನಾಟಕವಾಗಿದ್ದು ಒಟ್ಟು ಹದಿನಾಲ್ಕು ದೃಶ್ಯಗಳನ್ನು ಒಳಗೊಂಡಿದೆ. ವಿನೋದದ ಜೊತೆಗೆ ವಿಡಂಬನೆ ನಾಟಕದ ಜೀವಾಳದಂತೆ ಉದ್ದಕ್ಕೂ ತೀಕ್ಷ್ಣವಾಗಿ ಬಂದಿದೆ.

'ಗೊಂಗಡಿ' ಪದ ಹಲವರಿಗೆ ಅಪರಿಚಿತ. ನಾಟಕದಲ್ಲಿ ಕೆಲವು ಪಾತ್ರಗಳು ಗೊಂಗಡಿ ಅಂದರೇನು ಎಂಬುದಾಗಿ ಪ್ರಶ್ನಿಸುತ್ತವೆ ಕೂಡ. ಹೀಗಾಗಿ ಗೊಂಗಡಿಯೂ ನಾಟಕದಲ್ಲಿ ಒಂದು ಪಾತ್ರವಾಗಿದೆ ಮತ್ತು ಅದು ಕ್ರಮೇಣ ಬೆಳೆಯುತ್ತಾ ಇಡೀ ನಾಟಕವನ್ನು ವ್ಯಾಪಿಸಿಕೊಂಡಿದೆ. ಗೊಂಗಡಿ ಎಂದರೆ ಕಂಬಳಿ, ಗೊಪ್ಪೆ, ಗೊರಬು ಎಂಬ ಅರ್ಥಗಳಿವೆ. ತಲೆ ಮತ್ತು ಹೆಗಲನ್ನು ಮುಚ್ಚುವಂತೆ ಬಳಸುವ ವಸ್ತ್ರ. ನಾಟಕದಲ್ಲಿ ಕಳ್ಳ ಸನ್ಯಾಸಿಯೊಬ್ಬ ಜನರ ನಂಬಿಕೆ, ಶ್ರದ್ಧೆಯನ್ನು ನಗದೀಕರಿಸಿಕೊಂಡು, ಸಂಪಾದಿಸಿದ ಅಕ್ರಮ ಸಂಪತ್ತನ್ನು ಚಿನ್ನದ ರೂಪದಲ್ಲಿ ಸಂಗ್ರಹಿಸಿ ತನ್ನ ಗೊಂಗಡಿಯಲ್ಲಿ ಇರಿಸಿ, ಸದಾ ಹೊತ್ತು ತಿರುಗುತ್ತಿರುತ್ತಾನೆ. ಆವನ ಚಿನ್ನವನ್ನು ಕೊಳ್ಳೆಹೊಡೆಯಲು ಹೊಂಚುಹಾಕುವ ಬಿಜು ಮತ್ತು ಗಜು ಎಂಬ ಸಮಯಸಾಧಕರು, ಅಂತಹ ಅಕ್ರಮ ಸಂಪಾದಿತ ಚಿನ್ನವನ್ನು ಕಡಿಮೆ ಬೆಲೆಗೆ ಕೊಳ್ಳಲು ತುದಿಗಾಲಲ್ಲಿ ಇರುವ ಭದ್ರಮಣಿ, ರತ್ನಮಣಿ ಎಂಬ ಸೇಠುಗಳು ಸನ್ಯಾಸಿಯ ಸುತ್ತಮುತ್ತ ಹುಟ್ಟಿಕೊಂಡು, ನಾಟಕದ ಮುಖ್ಯ ತಿರುವಿಗೆ ಕಾರಣರಾಗುತ್ತಾರೆ. ನಾಟಕವು ಇವರೆಲ್ಲರ ಸೋಗಲಾಡಿತನ, ಠಕ್ಕುತನವನ್ನು ವಿಡಂಬಿಸುವುದರ ಜೊತೆಗೆ ಜನರ ಧಾರ್ಮಿಕ ಮೂಢನಂಬಿಕೆ, ಅಮಾಯಕತೆಗಳನ್ನೂ ವಿಡಂಬಿಸುತ್ತದೆ. ವಿಶೇಷವೆಂದರೆ, ಪುರುಷ ಪಾತ್ರಗಳೆಲ್ಲ ಇಂತಹ ಕ್ಷುಲ್ಲಕ ಮತ್ತು ಮೋಸ ವಂಚನೆಯ ಚಟುವಟಿಕೆಯಲ್ಲಿ ತೊಡಗಿದ್ದರೆ, ನಾಟಕದಲ್ಲಿ ಬರುವ ಏಕೈಕ ಮಹಿಳಾ ಪಾತ್ರ ಕಳೆದುಹೋದ ತನ್ನ ಗಂಡನಿಗಾಗಿ ನಿಷ್ಠೆಯಿಂದ ಹುಡುಕಾಟ ನಡೆಸುತ್ತಿರುತ್ತದೆ. ಹೀಗಾಗಿ ಕೊನೆಯಲ್ಲಿ ಆಕೆಗೆ ಗಂಡ ಮಾತ್ರವಲ್ಲ, ಅಪಾರ ಸಂಪತ್ತೂ ದೊರೆಯುವುದು ನಾಟಕ ಹೇಳಬಯಸುವ ನೀತಿಯ ಫಲ ಎನ್ನಬಹುದು.

ಠಕ್ಕ ಸನ್ಯಾಸಿ ತಾನು ಮಾಡಿದೆನೆಂದು ಹೇಳುವ ಕೆಲವು ಪವಾಡಗಳು ಹೀಗಿವೆ. 'ಅರಸೀಕೆರೆಯಲ್ಲಿ ತೆಂಗುಗಳಿಗೆ ಬಂದ ವಿಚಿತ್ರ ರೋಗದಿಂದಾಗಿ, ಗಿಡ ಹೂಬಿಟ್ಟರೆ ಕಾಯಿಯಾಗುತ್ತಿರಲಿಲ್ಲ; ಕಾಯಿ ಬಿಟ್ಟರೆ ಬಲಿಯುವ ಮೊದಲೇ ಉದುರುತ್ತಿತ್ತು. ಅಂತಹುದನ್ನು ತಾನು ಮಂತ್ರದ ಬಲದಿಂದ ನಿವಾರಿಸಿದೆ. ಈಗ ಬುಡವೇ ಕಾಣದಷ್ಟು ಅದರಲ್ಲಿ ಕಾಯಿ ಹಿಡಿದಿವೆ' ಎನ್ನುತ್ತಾನೆ. ಅದೇ ರೀತಿ ಮಲಬಾರಿನಲ್ಲಿ ಬಂದ ಮತ್ಸ್ಯಕ್ಷಾಮವನ್ನು ನಿವಾರಿಸಿದ್ದು, ಸತ್ತ ತೊಂಬತ್ತೆಂಟರ ವೃದ್ಧೆಯನ್ನು ಬದುಕಿಸಿದ್ದು ಆತ ಮಾಡಿದನೆಂದು ಹೇಳುವ ಇತರ ಪವಾಡಗಳು. ಠಕ್ಕು ವ್ಯಕ್ತಿಗಳು ಜನರನ್ನು ಮೋಸಗೊಳಿಸಿದ್ದನ್ನು ತಮಾಷೆ ಮಾಡುವ ಇಂಥ ಚಿತ್ರಣದ ಮೂಲಕ ನಾಟಕವು ಹೀಗೆ ಪವಾಡಗಳನ್ನು ಪ್ರಶ್ನಿಸದೆ ನಂಬುವ ಜನರನ್ನೂ ವಿಡಂಬಿಸುತ್ತದೆ. ನಾಟಕಕ್ಕೆ ಮುನ್ನುಡಿ ಬರೆದ ಡಾ.ನಾ.ದಾಮೋದರ ಶೆಟ್ಟಿ ಅವರು ಕೃತಿಯ ವಿಶಿಷ್ಟತೆಯನ್ನು ಕುರಿತು "ಇಲ್ಲಿನ ಸಂಭಾಷಣೆಗಳು ಕೃತಿ ವೇದಿಕೆಗೆ ಬರುವುದಕ್ಕಿಂತ ಮುನ್ನ ಓದಿನ ಸ್ತರದಲ್ಲಿಯೇ ನಗೆಯುಕ್ಕಿಸುತ್ತವೆ. ನಲುವತ್ತು ವರ್ಷಗಳಷ್ಟು ಹಳೆಯದಾದ ನಾಟಕವಾದ್ದರಿಂದ ಸನ್ಯಾಸಿಯ ಗೊಂಗಡಿಯಲ್ಲಿ ಕಾಲಧರ್ಮಕ್ಕೆ ಹೊಂದಿಕೊಳ್ಳುವ ಸಂಭಾಷಣಾ ವಿಧಾನ, ತಂತ್ರಗಳು ಬಳಕೆಗೊಂಡಿವೆ....ಪಾತ್ರಗಳೂ ಪರಿಸರವೂ ನಮ್ಮ ನಡುವಿನದ್ದೇ ಆಗಿದ್ದು, ಆಪ್ತವಾತಾವರಣ ನಿರ್ಮಾಣದ ಮೂಲಕ ನಾಟಕವನ್ನು ನಮ್ಮ ನಡುವಿಗೆ ತರುವುದಕ್ಕೆ ಕುಡ್ಪಿಯವರಿಗೆ ಸಾಧ್ಯವಾಗಿದೆ.... ಪ್ರಖ್ಯಾತ ಫ್ರೆಂಚ್ ನಾಟಕಕಾರ

ಮೊಲಿಯೆರ್‌ನ ನಾಟಕಗಳಲ್ಲಿ ಹಾಸ್ಯ ಓತಪ್ರೋತಗೊಳ್ಳುವ ವಿಧಾನಕ್ಕೂ ಕುಡ್ಪಿಯವರ ನಾಟಕಗಳಲ್ಲಿ ಹಾಸ್ಯ ಬಳಕೆಗೊಳ್ಳುವ ವಿಧಾನಕ್ಕೂ ಸಾಮ್ಯವಿದೆ. ಎರಡೂ ಕಡೆ ಗದ್ದಲವಿಲ್ಲದ ತೊರೆಯಂತೆ ಸಂಭಾಷಣೆ ಹರಿಯುತ್ತಾ ಒಮ್ಮೆಲೆ ಸ್ಫೋಟದಂತೆ ಹಾಸ್ಯ ಹುಟ್ಟಿಕೊಳ್ಳುತ್ತದೆ" (ಪು.೧-೨) ಎಂದು ಸರಿಯಾಗಿಯೇ ಗುರುತಿಸಿದ್ದಾರೆ.

**ಚುನಾವಣೆ ಅರ್ಥಾತ್ ಬನಾವಣೆ** (೧೯೫೪) ಮತ್ತು **ಸೈತಾನನೊಡನೆ ಕರಾರು** (ಅಪ್ರಕಟಿತ):

ಕುಡ್ಪಿಯವರ ಈ ಕೃತಿಗಳು ಚುನಾವಣೆಯನ್ನೇ ವಸ್ತುವಾಗಿ ಉಳ್ಳ ನಾಟಕಗಳಾಗಿವೆ. ಎರಡರಲ್ಲೂ ಚುನಾವಣಾ ಪ್ರಕ್ರಿಯೆಯ ಸ್ವರೂಪ ಮತ್ತು ಸ್ಪರ್ಧಾಳುಗಳ ಮನೋಭಾವ, ಅವರನ್ನು ಹುರಿದುಂಬಿಸುವ, ಕೆಣಕುವ ಮೂಲಕ ಸುಲಿಗೆ ಮಾಡಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಮಧ್ಯವರ್ತಿಗಳು ಇವೆಲ್ಲವನ್ನೂ ಒಟ್ಟಾಗಿ ವಿಡಂಬಿಸುವುದು ಕಂಡುಬರುತ್ತದೆ. **ಚುನಾವಣೆ ಅರ್ಥಾತ್ ಬನಾವಣೆ**ಯಲ್ಲಿ ಕಳ್ಳಸಂತೆಯಲ್ಲಿ ಹಣಗಳಿಸಿದ ಭುಜಂಗರಾಯ, ಕಮ್ಯುನಿಷ್ಟ್ ಪಕ್ಷದ ಪ್ರತಿನಿಧಿ ಚಂದರ್, ಶ್ರೀಮಂತ ವಿಧವೆ ಮೀನಾಕ್ಷಮ್ಮ ಮತ್ತು ಸ್ವತಂತ್ರ ಉಮೇದ್ವಾರ ಪಂಜಿಪೈಲ್ ಶಂಕ್ರಯ್ಯ ಎಂಬ ನಾಲ್ವರು ಹುರಿಯಾಳುಗಳು ಒಂದು ಸ್ಥಾನಕ್ಕೆ ಚುನಾವಣೆಗೆ ನಿಂತಿರುತ್ತಾರೆ.

ರಾಮಪ್ಪಯ್ಯ ಮತ್ತು ವಿಠ್ಠಲ ಪಂತ ಎಂಬವರೇ ಭುಜಂಗರಾಯ ಮತ್ತು ಚಂದರ್ ಅವರ ಚುನಾವಣಾ ಸಲಹೆಗಾರರು. ಇವರನ್ನು ಪಂಚತಂತ್ರದ ಕರಟಕ ದಮನಕರಿಗೆ ನಿಸ್ಸಂದಿಗ್ಧವಾಗಿ ಹೋಲಿಸಬಹುದು. ಇವರು ಭುಜಂಗರಾಯರನ್ನು ಉಬ್ಬಿಸಿ ಚುನಾವಣೆಗೆ ನಿಲ್ಲಿಸಿದ್ದರ ಉದ್ದೇಶವೇ 'ಭುಜಂಗರಾಯರು ಈ ಜನ್ಮದಲ್ಲಿ ಒಂದು ಚಿಕ್ಕಾಸನ್ನೂ ಹೊರಗೆ ಕೊಟ್ಟವರಲ್ಲ. ಧನವೆಂಬುದು ಒಂದೇ ಕಡೆಯಲ್ಲಿ ಕೆಸರು ನೀರಿನಂತೆ ನಿಲ್ಲಬಾರದು' ಎಂಬುದಕ್ಕಾಗಿ! ಹೀಗೆ ಒಂದೆಡೆ ಭುಜಂಗರಾಯರನ್ನು ನಿಲ್ಲಿಸಿ, ಇನ್ನೊಂದೆಡೆ ಅವರ ಪ್ರತಿಸ್ಪರ್ಧಿಗಳಿಗೂ ಕುಮ್ಮಕ್ಕು ನೀಡಿ, ಅವರೂ ಚುನಾವಣೆಗೆ ನಿಂತುಕೊಳ್ಳುವಂತೆ ಮಾಡುತ್ತಾರೆ. ಆ ಬಳಿಕ ಭುಜಂಗರಾಯರ ಪ್ರತಿಸ್ಪರ್ಧಿಗಳನ್ನು ಸ್ಪರ್ಧೆಯಿಂದ ಹಿಂದೆ ಸರಿಸುವುದಕ್ಕಾಗಿ, ಮತದಾರರನ್ನು ತೃಪ್ತಿಪಡಿಸುವುದಕ್ಕಾಗಿ, ಕರಪತ್ರ, ಬ್ಯಾನರ್‌ಗಳ ಮುದ್ರಣಕ್ಕಾಗಿ ಎಂದು ವಿವಿಧ ಕಾರಣಗಳಿಗಾಗಿ ಇಪ್ಪತ್ತು ಸಾವಿರಕ್ಕಿಂತಲೂ ಹೆಚ್ಚಿನ ಹಣವನ್ನು ರಾಯರಿಂದ ವಸೂಲಿ ಮಾಡುತ್ತಾರೆ! ನಾಟಕ ಓದುತ್ತಿದ್ದಂತೆ, ಇದು ಯಾವುದೋ ಕಾಲದ ವಸ್ತು ಎನಿಸದೆ, ಇಂದಿನ ಚುನಾವಣೆಗೂ ಯಥಾವತ್ ಅನ್ವಯವಾಗುವುದನ್ನು ನಾವು ಗಮನಿಸಬೇಕು.

ಕುಡ್ಪಿಯವರು ಈ ನಾಟಕವನ್ನು ಬರೆದದ್ದು ಐವತ್ತರ ದಶಕದಲ್ಲಿ. ಚುನಾವಣೆಗೆ ಮಹಿಳಾ ಉಮೇದುವಾರರು ಸಿದ್ಧವಾಗುವುದು ಯಾವ ಸಂದರ್ಭದಲ್ಲಿ? ಅವರು ನಿಂತಾಗ ಇತರ ಉಮೇದುವಾರರ ಮತ್ತು ಜನರ ನಿಲುವು ಏನಾಗಿರಬಹುದು? ಅವರ ಅರ್ಹತೆಯ ಮಾನದಂಡಗಳೇನು? ಚುನಾವಣೆಯ ಕಣದಲ್ಲಿ ಮಹಿಳಾ ಉಮೇದುವಾರರು ಗೆಲ್ಲುತ್ತಾರೆಯೇ? ಅಥವಾ ಒಟ್ಟು ಚುನಾವಣಾ ಪ್ರಕ್ರಿಯೆ ಮಹಿಳಾ ಪ್ರತಿನಿಧೀಕರಣದ ಕುರಿತು ಹೇಗೆ ಯೋಚಿಸುತ್ತದೆ? ಇವೇ ಮೊದಲಾದ ಪ್ರಶ್ನೆಗಳಿಗೂ ಈ ನಾಟಕ ಹಲವು ಒಳ ಸುಳುಹುಗಳನ್ನು ನೀಡುತ್ತದೆ.

"ಕಳೆದ ಚುನಾವಣೆಯಲ್ಲಿ ಸೂಚನೆ ಬಂದು, ಅವಳು ಒಪ್ಪಿದ್ದಳು. ಅಷ್ಟರಲ್ಲಿ ಅವಳ ಗಂಡನಿಗೂ ಅವಳಿಗೂ ಅನೇಕರು ವಿನಂತಿಸಿ, ಹೆದರಿಸಿ, ನಿಲ್ಲದ ಹಾಗೆ ಮಾಡಿದ್ದರು." (ಒತ್ತು ನನ್ನದು) ಎಂದು ರಾಮಪ್ಪಯ್ಯ ಹೇಳುತ್ತಾನೆ. ಅಷ್ಟೇ ಅಲ್ಲ ಈ ಬಾರಿ ಮೀನಾಕ್ಷಮ್ಮನನ್ನು ತಾನು ಒತ್ತಾಯದಿಂದ ಚುನಾವಣಾ ಕಣಕ್ಕೆ ಅಭ್ಯರ್ಥಿಯಾಗಿ ನಿಲ್ಲಿಸುತ್ತಾನೆ. ಇಲ್ಲಿ, ಮೀನಾಕ್ಷಮ್ಮನನ್ನು ರಾಮಪ್ಪಯ್ಯ ಏಕವಚನದಲ್ಲಿ ಸಂಬೋಧಿಸುವುದು ಮತ್ತು ಒಂದೊಮ್ಮೆ ಮಹಿಳಾ ಅಭ್ಯರ್ಥಿ ನಿಂತರೆ, ಪುರುಷ ಅಭ್ಯರ್ಥಿಗಳು ಅವರನ್ನು ನಿರುತ್ಸಾಹಗೊಳಿಸುವ, ಹೆದರಿಸಿ, ಬೆದರಿಸಿ ಕಣದಿಂದ ವಿಮುಖರಾಗುವಂತೆ ಮಾಡಲು ಕಾರ್ಯೋನ್ಮುಖರಾಗುವುದು–ತುಂಬ ಮುಖ್ಯವಾಗುವ ಸಂಗತಿ. ಈ ಬಾರಿ ಮೀನಾಕ್ಷಮ್ಮನನ್ನು ಆಯ್ಕೆ ಮಾಡಲು ರಾಮಪ್ಪಯ್ಯನಂಥ ವ್ಯಕ್ತಿಯ ಪ್ರಕಾರ ಆಕೆ 'ವಿಧವೆ'ಯಾಗಿರುವುದೇ ಅರ್ಹತೆ. ಎಂದರೆ, ರಾಜಕೀಯ ರಂಗದಲ್ಲಿ ಹೀಗೆ ಒಂಟಿ ಹೆಂಗಸು ಮಾತ್ರ ಪ್ರವೇಶ ಮಾಡಬಹುದು ಎಂಬ ಅರ್ಥವಾಗಲೀ, ವಿಧವೆ ಎಂಬ ಸಹಾನುಭೂತಿ ಇದ್ದಾಗ ಮಾತ್ರ ಅವಳಿಗೆ ಅರ್ಹತೆ ಒದಗುತ್ತದೆ ಎಂಬ ಅರ್ಥವಾಗಲೀ, ಪುರುಷನೋರ್ವ ಬೆಂಬಲಕ್ಕಿಲ್ಲದ ಮೀನಾಕ್ಷಮ್ಮನಂಥವರನ್ನು 'ಸಾರ್ವಜನಿಕ ಸೊತ್ತು' ಎಂಬಂತೆ ಸ್ವೀಕರಿಸುವ ಸಾರ್ವಜನಿಕರ ನಿಲುವಿನ ಕುಹಕವಾಗಲೀ ಓದುಗರಿಗೆ ಹೊಳೆಯದೇ ಇರುವುದಿಲ್ಲ.

ಚುನಾವಣೆಗೆ ಸ್ಪರ್ಧಿಸಲು ಆರಂಭದಲ್ಲಿ ಮೀನಾಕ್ಷಮ್ಮ ಒಪ್ಪುವುದಿಲ್ಲ. ಆಗ ಈ ಕರಟಕ ದಮನಕರು ಅವಳ ಮುಖಸ್ತುತಿಗೆ ತೊಡಗುತ್ತಾರೆ. ಅದೂ ಫಲ ನೀಡದಿದ್ದಾಗ ಅವರು, "ಭುಜಂಗರಾಯರು ನಿಮ್ಮ ಬಗ್ಗೆ–ಅಡುಗೆ ಮಾಡಿ, ಮನೆ ಕಸ ತೆಗೆದು, ಗಂಡನಿಗೂ ಮಕ್ಕಳಿಗೂ ಬಡಿಸುವ ಹೆಂಗಸರಿಗೆ ಶಾಸನ ಸಭೆ ಏಕೆ?. . . . . Woman is all head-no brains ಎಂದು ಬಯ್ದರು. ಅಷ್ಟೇ ಅಲ್ಲ, ಅವಾಚ್ಯ ಪದಗಳನ್ನು ಪ್ರಯೋಗಿಸಿದರು" ಎಂದು ಸುಳ್ಳುಸುಳ್ಳೇ ಹೇಳುತ್ತಾರೆ. ಆಗ ಮೀನಾಕ್ಷಮ್ಮ "ಅವನು ಭುಜಂಗನಾದರೆ, ನಾನು ಮುಂಗುಸಿ" ಎಂದು ತಾನು ಚುನಾವಣಾ ಅಭ್ಯರ್ಥಿಯಾಗಲು ಸಮ್ಮತಿಸುತ್ತಾಳೆ! ವಿಶೇಷವೆಂದರೆ, ಚುನಾವಣೆಯಲ್ಲಿ ಗೆಲ್ಲುವುದು ಆಕೆಯೇ!! ನಾಟಕದಲ್ಲಿ ಅವಳ ಗೆಲುವಿಗೆ ಕಾರಣವಾಗಿ ಕಂಡುಬರುವುದು ಅರ್ಹತೆಗಿಂತ ಅವಳ ವೈಧವ್ಯ!!!

ಚುನಾವಣಾ ಭ್ರಷ್ಟತೆಗೂ ನಾಟಕ ಕೈಗನ್ನಡಿಯಾಗಿದೆ. ಸ್ವತಂತ್ರ ಅಭ್ಯರ್ಥಿಯಾದ ಪಂಜೀಬೈಲು ಶಂಕ್ರಯ್ಯ ಓರ್ವ ಕುಡುಕ. ಆತನ ಏಕೈಕ ಅಜೆಂಡಾ "ಪಾನ ನಿಷೇಧವನ್ನು ರದ್ದುಗೊಳಿಸುವುದು". ಇಂಥವರೂ ಚುನಾವಣಾ ಅಭ್ಯರ್ಥಿ ಎಂದು ನಾಟಕವು ವಿಡಂಬಿಸುತ್ತವೆ. ಚುನಾವಣೆಯಲ್ಲಿ ಗೆಲುವಿಗೆ ವ್ಯಕ್ತಿಯ ಅರ್ಹತೆಗಿಂತ ಇನ್ನಿತರ ಅಂಶಗಳೇ ಮೇಲುಗೈ ಸಾಧಿಸುತ್ತವೆ ಎಂಬುದು ಕುಡ್ಪಿಯವರು ಹೇಳಬಯಸುವ ಇನ್ನೊಂದು ಮುಖ್ಯ ಸಂಗತಿ. ಸ್ಪರ್ಧಾಕಣದಲ್ಲಿ ಭುಜಂಗರಾಯರನ್ನು ಆತಂಕಿತರನ್ನಾಗಿಸಿದ್ದು ಶ್ರಮಿಕ ವರ್ಗದ ಪರವಾಗಿ ದನಿ ಎತ್ತುವ ಚಂದರ್‌ನ ಉಮೇದುವಾರಿಕೆ. 'ತನ್ನನ್ನು ತಾನು ಸಾಮಾನ್ಯ ವ್ಯಕ್ತಿ, ಜನರ ಸೇವಕನಾಗಲು ಬಂದವ' ಎಂದು ಹೇಳುವುದಲ್ಲದೆ, ಬಂಡವಾಳಶಾಹಿ ಮತ್ತು ಅದರ ಪ್ರತಿನಿಧಿಯಾದ ಭುಜಂಗರಾಯನನ್ನು

ತಾತ್ವಿಕವಾಗಿ ಎದುರಿಸುವ ಗಟ್ಟಿತನ ಇರುವ ವ್ಯಕ್ತಿ ಈ ಚಂದರ್ ಮಾತ್ರ. ಆತನ ಚುನಾವಣಾ ಭಾಷಣದಲ್ಲಿ ಈ ಅಂಶ ಸ್ಪಷ್ಟವಾಗಿ ಮೂಡಿದೆ.

**"ತಿಂಗಳಿಗೆ ನೂರು ರೂಪಾಯಿಗಿಂತ ಕಡಿಮೆ ಸಂಪಾದನೆ ಇದ್ದವರಿಗೆ ಒಂದೊಂದು ಮನೆ, ಒಂದೊಂದು ಎಕ್ರೆ ಸ್ಥಳ. ತಿಂಗಳಿಗೆ ನೂರು ರೂಪಾಯಿಗಿಂತ ಹೆಚ್ಚು ಸಂಪಾದನೆಯಿದ್ದವರಿಗೆ ಮನೆ ಮಾತ್ರ. ಐನೂರಕ್ಕೂ ಮಿಕ್ಕಿ ಸಂಪಾದನೆ ಇದ್ದವರಿಗೆ ಸೇಕಡಾ ೬೦ ರಷ್ಟು ತೆರಿಗೆ–ಈ ತೆರಿಗೆಗೆ "ಅಜೀರ್ಣ ತೆರಿಗೆ" ಎಂದು ಹೆಸರು. ತಿಂಗಳಿಗೆ ಸಾವಿರ ರೂಪಾಯಿ ಸಂಪಾದನೆಯಿದ್ದವರಿಗೆ ಸೇಕಡಾ ೮೦ ರಷ್ಟು ತೆರಿಗೆ– ಈ ತೆರಿಗೆಗೆ "ದರೋಡೆಖೋರ ತೆರಿಗೆ" ಅಂತ ಹೆಸರು. ಸಾವಿರಕ್ಕೂ ಮಿಕ್ಕಿ ಸಂಪಾದನೆ ಇದ್ದರೆ "ಒಪರೇಶನ್ ತೆರಿಗೆ"ಯನ್ನೂ, ಹತ್ತು ಸಾವಿರವಿದ್ದರೆ "ಪಿಸ್ತೂಲ್ ತೆರಿಗೆ"ಯನ್ನೂ ಹೊರಿಸಲಾಗುವುದು. ಹೇರಳ ಜಮೀನು ಇದ್ದವರಿಗೆ ಜಾಮೀನಿಲ್ಲದ ಶಿಕ್ಷೆ–ಹಲವು ಮನೆಗಳಿದ್ದವರಿಗೆ ಅನಾಥಾಶ್ರಮ. ಅರಮನೆಗಳವರು ಸೆರಮನೆಗೆ–ಸೆರಮನೆಗಳವರು ಅರಮನೆಗೆ ವರ್ಗಾವರ್ಗಿ ಮಾಡಲ್ಪಡುವರು. ಗಜೆಟಿನಲ್ಲಿ ಆಗಾಗ್ಗೆ ವರ್ಗಾವರ್ಗಿಗಳನ್ನು ಪ್ರಕಟಿಸಲಾಗುವುದು. ಕೆಲಸಗಾರರ ಕೆಲಸದ ಅವಧಿಯನ್ನು ದಿನಕ್ಕೆ ಐದು ಗಂಟೆಗೆ ಇಳಿಸಿ, ಸಂಬಳವನ್ನು ಸೇಕಡಾ ಇನ್ನೂರಕ್ಕೆ ಏರಿಸುವೆವು. ಹೆಂಗುಸರಿಗೆ ಗರ್ಭಿಣಿ ರಜೆ ಮತ್ತು ಪ್ರಸೂತಿ ರಜೆ ಎಂದು ಎರಡು ವಿಧದ–ಒಟ್ಟು ವರ್ಷದಲ್ಲಿ ಆರು ತಿಂಗಳ ಹಕ್ಕಿನ ರಜೆಯನ್ನೂ ಹನ್ನೆರಡು ದಿನ ಆಕಸ್ಮಿಕ ರಜೆಯನ್ನೂ ಕೊಡಿಸುವೆವು."** (ಪು.೧೮–೧೯)

ಇಂತಹ ಚಂದರ್‌ನನ್ನು ಜನ ಸ್ವೀಕರಿಸಲಿಲ್ಲ! ಭುಜಂಗರಾಯ ಕೊಟ್ಟ ಹಣ ಪಡೆದು ಚಂದರ್ ಚುನಾವಣಾ ಕಣದಿಂದ ನಿವೃತ್ತನಾದನೇ? ಇಷ್ಟು ಬದ್ಧತೆ ಇದ್ದವ ಯಾಕೆ ಗೆಲ್ಲಲಿಲ್ಲ? ಚಂದರ್‌ನ ಸೋಲು ರಾಮಪ್ಪಯ್ಯ ಮತ್ತು ವಿಠ್ಠಲ ಪಂತರ ಕರಾಮತ್ತೇ? ಇವೇ ಮುಂತಾದ ಹಲವು ಪ್ರಶ್ನೆಗಳು ಓದುಗರಿಗೆ ಮೂಡುತ್ತವೆ. ನಾಟಕದ ಚಿಕ್ಕ ಚೌಕಟ್ಟಿನಲ್ಲಿ ಅವುಗಳಿಗೆ ಅವಕಾಶ ಒದಗಿಲ್ಲ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಹಲವು ಗಂಭೀರ ಚಿಂತನೆ/ಪ್ರಶ್ನೆಗಳನ್ನು ಹುಟ್ಟುಹಾಕಬಲ್ಲ ಶಕ್ತಿ ಈ ಪುಟ್ಟ ನಾಟಕಕ್ಕೆ ಇದೆ.

**ಚುನಾವಣೆ ಅರ್ಥಾತ್ ಬನಾವಣೆ** ನಾಟಕದ ಚಿಂತನೆಯು **ಸೈತಾನನೊಡನೆ ಕರಾರು** ನಾಟಕದಲ್ಲಿ ಮುಂದುವರಿಯುತ್ತದೆ. ಇಲ್ಲೂ ಹಯವದನರಾಯರು ಮತ್ತು ಮರುಳಸಿದ್ದಯ್ಯ ಎಂಬವರು ಸ್ಪರ್ಧಾಳುಗಳಾದರೆ ಕೇಶವಯ್ಯ ಮತ್ತು ಶಂಕ್ರು ಅವರ ಚುನಾವಣಾ ಸಲಹೆಗಾರರು. ಇವರ ಕುತಂತ್ರದಿಂದ ಸ್ಪರ್ಧಾಳುಗಳು ಪರಸ್ಪರ ದ್ವೇಷ, ಅಸೂಯೆಗಳನ್ನು ಪ್ರಕಟಿಸುತ್ತ ಮಾನವತ್ವವನ್ನು ಮರೆತು ಪಶುತ್ವವನ್ನು ಮೈಗೂಡಿಸಿಕೊಳ್ಳುತ್ತಾರೆ; ತಮ್ಮ ಸಂಪತ್ತನ್ನು ಕಳೆದುಕೊಂಡು, ಸಾಮಾಜಿಕ ಘನತೆಯನ್ನು ಕಳೆದುಕೊಂಡು ಕೊನೆಗೆ ಬುದ್ಧಿ ಕಲಿಯುತ್ತಾರೆ. ಹೀಗಾಗಿ ಹಯವದನರಾವ್ ಮತ್ತು ಮರುಳಸಿದ್ದಯ್ಯನವರು 'ಕೋಳಿಕಟ್ಟ'ದ ಕೋಳಿಗಳಂತೆಯೂ, ಕೇಶವಯ್ಯ ಮತ್ತು ಶಂಕ್ರು ಆ ಕೋಳಿಗಳನ್ನು ಯುದ್ಧಕ್ಕಿಳಿಸಿ ಮೋಜು ನೋಡುವವರಾಗಿಯೂ ಮೂಡಿಬರುತ್ತಾರೆ!

**ಚುನಾವಣೆ ಎಂದರೇನು?** ಎಂಬ ಪ್ರಶ್ನೆಯಿಂದ ಈ ನಾಟಕ ಆರಂಭವಾಗುತ್ತದೆ. ಹಯವದನರಾಯರ ಗುಮಾಸ್ತ ಶಿವಣ್ಣಯ್ಯನ ಪ್ರಕಾರ '**ಚುನಾವಣೆ ಎಂದರೆ ಸೈತಾನನೊಡನೆ ಕರಾರು**' ಎಂಬ ಅರ್ಥ. ಆದರೆ ಹಯವದನರಾಯರ ಸ್ನೇಹಿತ ಕೇಶವಯ್ಯನ ಪ್ರಕಾರ **"ಚುನಾವಣೆಯೆಂದರೆ ಒಂದು ಆಟ-ಉದ್ರೇಕ-ಜೂಜು-ವಿನೋದ. ಒಂದು ಆವಶ್ಯಕ ಆಟ-ಆವಶ್ಯಕ ಉದ್ರೇಕ-ಆವಶ್ಯಕ ಜೂಜು-ಆವಶ್ಯಕ ವಿನೋದ."** ಈ ದ್ವಂದ್ವದಿಂದ ಆರಂಭವಾಗುವ ನಾಟಕ, ಹಲವು ತಿರುವುಗಳನ್ನು ಪಡೆದುಕೊಳ್ಳುತ್ತದೆ. ಅಂತಹ ಒಂದು ಸನ್ನಿವೇಶ ನಾಟಕದಲ್ಲಿ ಹೀಗೆ ಬರುತ್ತದೆ-

**ಕೇಶವಯ್ಯ: ಇನ್ನೂ ತಡ ಮಾಡಬಾರದು. ಆ ಮರುಳಸಿದ್ದಯ್ಯ ತನ್ನ ಚುನಾವಣಾ ಪ್ರಚಾರ**

**ಆರಂಭ ಮಾಡಿಯೂ ಆಯಿತು. ಒಂದು ಲಕ್ಷ ಕರಪತ್ರ ಮಾಡಿಸಿದ್ದಾನಂತೆ.**

**ಹಯವದನ ರಾಯ: ಒಂದು ಲಕ್ಷ? ಶಿವಣ್ಣಯ್ಯ, ಬರ್ಕೊಳ್ಳಿ. ನಮ್ಮದು ಒಂದೂವರೆ ಲಕ್ಷ.**

**ಕೇಶವಯ್ಯ: ಎರಡು ಸಾವಿರ ವಾಲ್ ಪೋಸ್ಟರ್.**

**ಹಯವದನರಾಯ: ಶಿವಣ್ಣಯ್ಯ, ನಮ್ಮದು ಎರಡೂವರೆ ಸಾವಿರ.**

**ಕೇಶವಯ್ಯ: ಐವತ್ತು ಕಾರುಗಳು.**

**ಹಯವದನರಾಯ: ಶಿವಣ್ಣಯ್ಯ, ನಮಗೆ ಎಪ್ಪತ್ತೈದು.**

**ಕೇಶವಯ್ಯ: ನೂರು ಮಂದಿ ಸ್ವಯಂ ಸೇವಕರು.**

**ಹಯವದನರಾಯ: ಶಿವಣ್ಣಯ್ಯ, ನಮ್ಮ ಸ್ವಯಂ ಸೇವಕರು ಇನ್ನೂರು! ಸಾಕಾಗದಿದ್ದರೆ, ಗೋವೆ ಮತ್ತು ಕೇರಳದಿಂದ ತರಿಸ್ಬೇಕು.**

**ಕೇಶವಯ್ಯ: ಶಹಭಾಸ್! ಹಾಗಿರಬೇಕು ಆವೇಶ! ಈಗಲಾದರೆ ನಿನ್ನ ಮೈಮೇಲೆ ಬಂತು**

**ಚುನಾವಣಾ ಸೈತಾನ್!**

**ಹಯವದನರಾಯ: ಸೈತಾನ್? ಫೂ! ಸೈತಾನನನ್ನು ಚಾ ಗ್ಲಾಸಿನಲ್ಲಿ ಹಾಕಿ ಕುಡಿದುಬಿಟ್ಟೇನು. (ಪು.೫-೬)**

ಮರುಳಸಿದ್ದಯ್ಯನ ಸ್ಥಿತಿ ಇದಕ್ಕಿಂತ ಭಿನ್ನವಲ್ಲ. ಮತದಾರರಿಗೆ ನೀಡುವ ಊಟ, ಭಕ್ಷೀಸು, ಚುನಾವಣಾ ಪ್ರಚಾರಕ್ಕೆ ಬಳಸುವ ವಾದ್ಯ, ಓಮ್ಮೇಳ ಹೀಗೆ ಪ್ರತಿಯೊಂದರಲ್ಲೂ ಉಮೇದುವಾರರಲ್ಲಿ ಮೇಲಾಟ ಜರುಗುತ್ತದೆ. ಇಲ್ಲೆಲ್ಲ ಚುರುಕಾದ ಸಂಭಾಷಣೆ, ವಿಡಂಬನೆಯ ಮೊನಚು ನಾಟಕದ ಯಶಸ್ಸಿಗೆ ಪೂರಕವಾಗಿ ದುಡಿದಿವೆ.

ನಾಟಕದಲ್ಲಿ ಗೆಲ್ಲುವುದು ಹಯವದನರಾಯರು. ಅದಕ್ಕೆ ಕಾರಣ ಕೇಶವಯ್ಯನ ಮಾತಿನಲ್ಲಿ ಪ್ರಕಟವಾಗಿದೆ. "ಚುನಾವಣೆ ಎಂಬ ಈ ಸೈತಾನನ ಕರಾರಿಗೆ ನೀನು ಸಹಿ ಮಾಡಿದ್ದರೂ ನೀನದರಿಂದ

ಪಾರಾಗಿರುವಿ. ಏತರಿಂದ ಗೊತ್ತೇ? ವಿನಯಪೂರ್ವಕ ನಮಸ್ಕಾರದಿಂದ; ಜನತೆಯ ಮುಟ್ಟಿ ತೋರಿದ ಪ್ರೇಮದಿಂದ. ಮನುಷ್ಯನೊಡನೆ ಹಣವಿದ್ದರೂ ನಮಸ್ಕಾರದ ವಿನಯವಿಲ್ಲದಿದ್ದರೆ, ಅವನು ಯಾರಿಂದಲೂ ಗೌರವಾದರಗಳನ್ನು ಹೊಂದಲಾರನು. . . ." (ಪು.೩೦).

ಈ ಮಾತುಗಳಲ್ಲಿ ನಾಟಕದ ಆಶಯ ಪ್ರಕಟವಾಗುತ್ತದೆ. ಈ ಆಶಯ ಹಯವದನರಾಯರ ಮುಂದಿನ ಮಾತುಗಳಲ್ಲಿ ಇನ್ನಿಷ್ಟು ನಿಚ್ಚಳವಾಗಿದೆ. "ಚುನಾವಣೆ ಮುಗಿದ ನಂತರ ನಮಸ್ಕಾರ ಅವಶ್ಯವಿಲ್ಲ ಎಂದು ನನ್ನ ಮಿತ್ರ ಕೇಶವಯ್ಯ ಹೇಳಿದರು. ಅದರಲ್ಲೊಂದು ಅರ್ಥವುಂಟು. ಕೇವಲ ನಮಸ್ಕಾರಗಳಿಂದ ಪ್ರಯೋಜನವೇನು? ಈಗ ಚುನಾಯಿಸಿ ಬಂದ ನಂತರ ಮಾಡಬೇಕು ಉಪಕಾರ. ಅದನ್ನು ಮಾಡುವೆನೆಂದು ವಚನ ಕೊಡುತ್ತೇನೆ"(ಪು.೩೧) ಎನ್ನುತ್ತಾನೆ. ಈ ನಾಟಕದ ಅಂತ್ಯ **ಚುನಾವಣೆ ಅರ್ಥಾತ್ ಬನಾವಣೆ** ನಾಟಕಕ್ಕಿಂತ ಈ ಕಾರಣಕ್ಕಾಗಿ ಮುಖ್ಯವಾಗುತ್ತದೆ. ಭ್ರಷ್ಟ ವ್ಯವಸ್ಥೆಯೊಳಗೂ ಸ್ವಲ್ಪ ಆಶಾವಾದ ಈ ನಾಟಕದಲ್ಲಿ ಪ್ರಕಟವಾಗಿದೆ. ಇಂತಹ ಕಿರುನಾಟಕಗಳು ಇ(ಅ)ಂದಿನ ವ್ಯವಸ್ಥೆಯನ್ನೂ ಎಷ್ಟು ಪರಿಣಾಮಕಾರಿಯಾಗಿ ಕಟ್ಟಿಕೊಡುತ್ತವೆ ಎಂಬುದು ಗಮನಾರ್ಹ ವಿಷಯ.

ಕುಡ್ವಿಯವರ **ವರ್ತಕ ವಿಲಾಸ** ಎಂಬುದು ಇನ್ನೊಂದು ಅಪ್ರಕಟಿತ ಕಿರುನಾಟಕ. ಹೆಸರೇ ಸೂಚಿಸುವ ಹಾಗೆ ಇದು ವ್ಯಾಪಾರೀ ಧರ್ಮದ ಕುರಿತು ಮಾತನಾಡುತ್ತದೆ; ಹಾಗೂ ವರ್ತಕರ ಮೋಸ ಮತ್ತು ಕಳ್ಳ–ಕದೀಮರ ಮೋಸ ಇವುಗಳ ನಡುವಿನ ಸಾಮ್ಯ ಮತ್ತು ವೈಷಮ್ಯದತ್ತ ಗಮನಸೆಳೆಯುತ್ತದೆ. ನಾಟಕದ ಆರಂಭದಲ್ಲಿ ಸಾಹುಕಾರನ ಬಳಿಗೆ 'ಗಂಪು' ಎಂಬ ನಿರುದ್ಯೋಗಿ ಉದ್ಯೋಗವನ್ನು ಕೇಳಿಕೊಂಡು ಬರುತ್ತಾನೆ. ಗಂಪುವಿನ ಶೈಕ್ಷಣಿಕ ಅರ್ಹತೆಯನ್ನು ತಿಳಿದ ಬಳಿಕವೂ ಆತ ತನ್ನ ಸಹಾಯಕನಾಗಲು ಅರ್ಹನೇ ಎಂಬುದನ್ನು ತಿಳಿಯುವುದಕ್ಕಾಗಿ ಸಾಹುಕಾರ ಗಂಪುವಿಗೆ ಮೂರು ಪ್ರಶ್ನೆಗಳನ್ನು ಕೇಳುತ್ತಾನೆ. ಈ ಪರೀಕ್ಷೆಯಲ್ಲಿ ಗಂಪು ತೇರ್ಗಡೆಯಾಗುವುದಿಲ್ಲ. ನಾಟಕದ ಮುಂದಿನ ಭಾಗದಲ್ಲಿ ಸಾಹುಕಾರ ಕೇಳಿದ ಮೂರು ಪ್ರಶ್ನೆಗಳನ್ನೇ ಗಂಪು ಜಗ್ಗುವಿಗೆ ಕೇಳುತ್ತಾನೆ. ಆ ಮೂರು ಪ್ರಶ್ನೆಗಳು ಮತ್ತು ಅವುಗಳಿಗೆ ಗಂಪು ಮತ್ತು ಜಗ್ಗು ಉತ್ತರಿಸಿದ ರೀತಿ ಈ ಕೆಳಗಿನಂತಿವೆ:

ಸಾಹುಕಾರ: "ಮೂರು ಮತ್ತು ಮೂರು ಕೂಡಿಸಿದರೆ ಏನಾಗುತ್ತೆ?" (ಪ್ರಶ್ನೆ ೧)

ಗಂಪು: "ಏನಾಗುತ್ತೆ" ಎಂದು ಮರುಪ್ರಶ್ನಿಸುತ್ತಾನೆ. ಸಾಹುಕಾರ ಉತ್ತರ ನಿರೀಕ್ಷಿಸಿ ಪುನಃ,

'ಏನಾಗುತ್ತೆ ಎಂದಾಗಲೂ ಗಂಪು ಅದೇ ಮಾತನ್ನು ಪುನರುಚ್ಚರಿಸುತ್ತಾನೆ. ಆಗ ಸಾಹುಕಾರ ಸಿಟ್ಟಿಗೆದ್ದು, "ಆರು ಎಂದು ಹೇಳಲೂ ಬರುವುದಿಲ್ಲವೇ" ಎಂದಾಗ,

ಗಂಪು: "ಏನಾಗುತ್ತೆ ಎಂದು ಕೇಳಿದಿರಿ, ಎಷ್ಟಾಗುತ್ತೆ ಅಂದರೆ ನಾನು ಆರು ಎನ್ನುತ್ತಿದ್ದೆ" ಎಂದು ಉತ್ತರಿಸುತ್ತಾನೆ.

(ಇದೇ ಪ್ರಶ್ನೆಗೆ ಜಗ್ಗುವಿನ ಉತ್ತರ: "ಆರು ಮತ್ತು ಆರು ಕೂಡಿಸಬೇಕೆಂಬ ಆಸೆ ಹುಟ್ಟುತ್ತದೆ".)

ಸಾಹುಕಾರ: "ನೀನು ಇಲ್ಲಿ ಕುಳಿತು ಹಣ ಲೆಕ್ಕ ಮಾಡುತ್ತಿರುವಾಗ-ಫಕ್ಕನೆ ಒಬ್ಬನು ನುಗ್ಗಿ ಪಿಸ್ತೂಲ್ ತೋರಿಸಿದರೆ ಏನು ಮಾಡುತ್ತೀ ಹೇಳು!" (ಪ್ರಶ್ನೆ ೨)

ಗಂಪು: ಅದನ್ನು ಕೈಗೆ ತೆಗೆದುಕೊಂಡು ನೋಡಿ, ವಾಪಸ್ ಕೊಡುತ್ತೇನೆ. ನನಗೇಕೆ?"

(ಜಗ್ಗು: "ಹಣ ಯಾರದು? ಲೆಕ್ಕ ಮಾಡುವವನದೋ ಮತ್ತೊಬ್ಬನದೋ? ಸಾಹುಕಾರನದಾದರೆ, ನನಗರ್ಥ-ಪಿಸ್ತೂಲಿನವನಿಗರ್ಥ")

ಸಾಹುಕಾರ: "ನಾವು ಮುಡಿಗೆ ೪೦ ರೂಪಾಯಿಯಂತೆ ಒಂದು ಸಾವಿರ ಮುಡಿ ಅಕ್ಕಿ ಖರೀದಿಸುತ್ತೇವೆ.

ಮುಡಿಯ ಮೇಲೆ ೫ ರೂಪಾಯಿ ಲಾಭವಿಟ್ಟು ಮಾರುತ್ತಿದ್ದೇವೆ. ನೂರು ಮುಡಿ ಮಾರುವುದರೊಳಗೆ-ಪೇಟೆಯಲ್ಲಿ ಧಾರಣೆ ೬೦ ರೂಪಾಯಿಗೇರಿತು. ಆಗ ಈ ಭಂಡಸಾಲೆಯಲ್ಲಿರುವ ನೀನು ಏನು ಮಾಡುವೆ?" (ಪ್ರಶ್ನೆ ೩)

ಗಂಪು: "ನಮ್ಮೊಡನೆ ೪೦ ರೂಪಾಯಿ ಖರೀದಿಯ ೯೦೦ ಮುಡಿಗಳು ಉಳಿದಿವೆ-೪೫ ರಂತೇ ಕೊಡುತ್ತೇನೆ ಅಂತ ಕರಪತ್ರ ಹಂಚಿದರೆ ಏನಾಗುತ್ತೆ?

(ಜಗ್ಗು: ೯೦೦ ಮುಡಿಗಳನ್ನು ೬೫ ರಂತೆ ಮಾರಿ, ಸಾಹುಕಾರನಿಗೆ ೬೦ ರ ಧಾರಣೆ ಕೊಡುವುದೊಳ್ಳೆಯದು.")

ಮೇಲಿನ ಭಾಗಗಳು ನಾಟಕದ ಸತ್ವದ ಮೇಲೆ ವಿಶೇಷ ಬೆಳಕು ಚೆಲ್ಲುತ್ತವೆ. ಸಹಜವಾಗಿಯೇ ಗಂಪು ಸಾಹುಕಾರನ ಪರೀಕ್ಷೆಯಲ್ಲಿ ಫೇಲಾಗುತ್ತಾನೆ. ಮತ್ತು ಜಗ್ಗುವಿನ ಉತ್ತರದಿಂದ ಗಂಪು 'ಬದುಕುವ ದಾರಿ' ಕಲಿತು, ಅವನ ಮಾರ್ಗ ಹಿಡಿಯುತ್ತಾನೆ! ಜಗ್ಗುವಿನ ಪ್ರಕಾರ "ವ್ಯಾಪಾರ. ಜಗತ್ತಿನಲ್ಲಿ ಪ್ರತಿಯೊಂದೂ ವ್ಯಾಪಾರವೇ. ನಿಮಗೆ ಬದುಕಿ ಉಳಿಯಬೇಕಾದರೆ ವ್ಯಾಪಾರೀಲೋಕ ಸೇರಿರಿ. ಇಲ್ಲವಾದರೆ ಲೋಕವ್ಯಾಪಾರ ಬಿಡಿರಿ" (ಪು.೧೩) ಎಂಬುದೇ ನೀತಿಯಾಗಿದೆ. ಹಾಗೂ ನಾಟಕದ ಕೊನೆಯಲ್ಲಿ ಆತನೇ ಹೇಳುವ,

"ಸ್ವಾಮೀ, ಯಾರು ಪ್ರಾಮಾಣಿಕತೆ, ಕುಲೀನತೆಯ ಮೊಹರು ಹಾಕಿಕೊಂಡು ಗರ್ವದಿಂದ ನಡೆಯುತ್ತಿರುವರೋ ಅವರು ತುಸು ತಮ್ಮೊಳಗೇ ವಿಚಾರಮಾಡಿಕೊಳ್ಳಬೇಕು. . . . ನಿಮ್ಮಲ್ಲಿ ಎಷ್ಟು ಮಂದಿ ಪ್ರಾಮಾಣಿಕರಿರುವರು ಎಂದು ಹೇಳಬಲ್ಲಿರಾ? ತಾತ್ವಿಕವಾಗಿ ನಾವೂ-ನೀವೂ ಒಂದೇ. ನಾವು ಒಬ್ಬನು ಮೈಮರೆತಿರುವಾಗ ಕದ್ದಿರಬಹುದು-ನೀವು ಒಬ್ಬರು ಎಚ್ಚರವಿರುವಾಗಲೇ ಅಪಹರಿಸುತ್ತಿಲ್ಲವೇ?" (ಪು.೫೫)

ಎನ್ನುವ ಮೂಲಕ ಅವರ ಢೋಂಗೀತನವನ್ನು ಬಯಲಿಗೆಳೆಯುತ್ತಾನೆ. ನಾಟಕ ಹಲವು ತಿರುವುಗಳನ್ನು ಹಾದು, ದಾರಿತಪ್ಪಿದ ಗಂಪು, ಜಗ್ಗು ಅವರು ಗೃಹಸ್ಥರಾಗುವಲ್ಲಿಗೆ ಮುಕ್ತಾಯ ಕಾಣುತ್ತದೆ. ವಸ್ತುವಿನ ನಿರ್ವಹಣೆಯ ದೃಷ್ಟಿಯಿಂದ ನಾಟಕ ಮುಖ್ಯವಾಗದಿದ್ದರೂ, ಚುರುಕಾದ

ಸಂಭಾಷಣೆ, ಪದಗಳ ಜೊತೆ ಆಟವಾಡುವ ಕುಡ್ವಿಯವರ ಶೈಲಿಯ ಕಾರಣದಿಂದ ಗಮನಸೆಳೆಯುತ್ತದೆ.

## ಹರಟೆ

### ಕಸದ ಡಬ್ಬಿಗಳು (೧೯೪೯)

ಇದು ಇಪ್ಪತ್ತನಾಲ್ಕು ಹರಟೆಗಳನ್ನೊಳಗೊಂಡ ಕೃತಿ. ಕುಡ್ವಿಯವರ ವಿನೋದ, ವಿಡಂಬನಾ ಗುಣಗಳನ್ನು ಅರಿಯಬೇಕಿದ್ದರೆ, ಸಮಕಾಲೀನ ವಿದ್ಯಮಾನಗಳಿಗೆ ತಕ್ಷಣದ ಪ್ರತಿಕ್ರಿಯೆಯನ್ನು ಗ್ರಹಿಸಬೇಕಿದ್ದರೆ, ನಾವು ಅವರ ಹರಟೆಗಳನ್ನು ಓದಬೇಕು. ಅವರ ಇಪ್ಪತ್ತನಾಲ್ಕು ಹರಟೆಗಳು **ಕಸದ ಡಬ್ಬಿಗಳು** ಎಂಬ ಸಂಕಲನದಲ್ಲಿ ಪ್ರಕಟವಾಗಿವೆ. ಮೊದಲ ಹರಟೆಯೇ **ಕಸದ ಡಬ್ಬಿಗಳು.** ಆರಂಭದಲ್ಲಿ 'ಕಸ' ಮತ್ತು 'ಡಬ್ಬಿ'ಯ ಕುರಿತು ಘನವಿದ್ವಾಂಸರು ಕಾಲಕಾಲಕ್ಕೆ ನೀಡಿದ ವ್ಯುತ್ಪತ್ತಿ, ನಡೆಸಿದ ವಾಗ್ವಾದಗಳನ್ನು ಹೇಳುತ್ತ, ಒಟ್ಟಿನಲ್ಲಿ 'ಶಬ್ದವ್ಯುತ್ಪತ್ತಿ ನಮಗೇಕೆ? ಕಸವೆಂದರೆ ಕಸ, ಡಬ್ಬಿ ಎಂದರೆ ಡಬ್ಬಿ ಎಂದರಾಯಿತು' ಎನ್ನುತ್ತಾರೆ. ತಮ್ಮದು 'ಉಪನ್ಯಾಸವಲ್ಲ, ಕಸದ ಡಬ್ಬಿಗಳ ಮೇಲೆ ಮೀಮಾಂಸೆಯಂತೂ ಅಲ್ಲ. ಕಂಡದ್ದನ್ನು ಇಲ್ಲಿ ಕಾಣಿಸೋದು' ಎಂದು ಸೂಚಿಸಿ ಮುಂದುವರಿಯುತ್ತಾರೆ.

**ಕಸದ ಡಬ್ಬಿಗಳು** ಸರಿಯಾದ ಅರ್ಥದಲ್ಲಿ ಒಂದು ಹರಟೆ/ಪ್ರಬಂಧ. ಆರಂಭದಲ್ಲಿ ವಿಷಯದ ಕುರಿತಂತೆ ಇತರರ ಕಾಲಿಕ ಹೇಳಿಕೆಗಳ ಪ್ರಸ್ತಾವನೆಯ ಬಳಿಕ, ವಿಷಯದ ಕುರಿತು ವಕಾಲತ್ತು ನಡೆಸುತ್ತ, ಅದರ ಉಪಯುಕ್ತತೆ ಮತ್ತು ನಿರುಪಯುಕ್ತತೆಯ ಕುರಿತು ವಾದ-ವಿವಾದಗಳನ್ನು ಬೆಳೆಸುತ್ತ ಪ್ರಬಂಧ ತನ್ನ ಹೂರಣವನ್ನು ಗಟ್ಟಿಗೊಳಿಸುತ್ತದೆ. "ದೇಶದ ಸಂಪತ್ತನ್ನು ವಾಣಿಜ್ಯದಿಂದ ಅಳೆಯಬಹುದಾದರೆ, ಆಯಾ ಊರುಗಳ ಸಂಪತ್ಸಮೃದ್ಧಿಯನ್ನು ಅಳೆಯಲು ಅಲ್ಲಿ ಇರಿಸಿದ ಈ ಡಬ್ಬಿಗಳೇ ಒಳ್ಳೆ ತರದ ಕಳಸಿಗೆಗಳಾಗಿವೆ" (ಪು.೩) ಎಂಬ ಚಿಂತನೆ ಪ್ರಬಂಧದ ಒಂದು ಧ್ವನಿಯಾಗಿದೆ. "ಹಿಂದೂ-ಮುಸ್ಲಿಂ-ಕ್ರೈಸ್ತ-ಪಾರಸಿಕವೆಂಬ ಭೇದವಿಲ್ಲದೆ, ಎಲ್ಲರೂ ತಂದೊಗೆದ ವಿಷವನ್ನು ಇವು ಧರಿಸಿಕೊಳ್ಳುತ್ತವೆ. ಇದು ಹಿಂದೂಗಳ ಕಸ, ಇದು ಮುಸಲ್ಮಾನರದು ಎಂಬ ಭೇದಬುದ್ಧಿ ಅವುಗಳಿಗಿಲ್ಲ" ಎಂದು ಅವುಗಳ ಪರ ವಕಾಲತ್ತು ಪ್ರಬಂಧದಲ್ಲಿ ನಡೆಯುತ್ತವೆ. ಹಾಗೂ "ತೊಂದರೆ ಕೊಟ್ಟರೂ ಅವು ಹಿಂಸೆ ಮಾಡೋದಿಲ್ಲ, ತಾಳ್ಮೆಯಿಂದ ಸಹಿಸಿ, ಅನೇಕ ಜೀವಿಗಳಿಗೆ ತನ್ನಲ್ಲಿರುವುದನ್ನು ಉಣಬಡಿಸುವ ತ್ಯಾಗಜೀವಿಗಳು" ಎನ್ನುವ ಮೂಲಕ, ಕಸದ ಡಬ್ಬಿಗಳಿಂದ ಮನುಷ್ಯ ಕಲಿಯಬೇಕಾದ ಹಲವು ಸಂಗತಿಗಳಿವೆ ಎಂಬುದರತ್ತ ಪ್ರಬಂಧ ಮುಖಮಾಡುತ್ತದೆ.

**ಮನುಷ್ಯನೂ ಅವನ ತಲೆಯೂ** ಎಂಬುದು ವಿನೋದ ಪ್ರಧಾನವಾದ ಪ್ರಬಂಧ/ಹರಟೆ ಎನ್ನಬಹುದು. ಇಲ್ಲೂ ಶೀರ್ಷಿಕೆಯ ಸ್ವರೂಪದ ಕುರಿತ ಚರ್ಚೆಯಿಂದ ಪ್ರಬಂಧ ಆರಂಭವಾಗುತ್ತದೆ. ವಾಸ್ತವದಲ್ಲಿ ಅದು ಬ್ರಿಲಿಯಂಟೈನ್ ಎಂಬ ಕೇಶತೈಲ ಅಂದು ಜನರನ್ನು ಮರುಳುಗೊಳಿಸಿದ್ದ ಪರಿಯನ್ನು ಅತ್ಯಂತ ನಾಟಕೀಯವಾಗಿ ವಿವರಿಸುತ್ತದೆ. ಯಾವ ಬ್ರಿಲಿಯಂಟೈನ್ ಕೇಶವರ್ಧಕವೆಂದು

ಜಾಹೀರಾತು ಹೇಳುತ್ತಿತ್ತೋ ಅದರ ಪರ ಮತ್ತು ವಿರೋಧವಾಗಿ ವಕಾಲತ್ತು ಮಾಡುವ, ಅದಕ್ಕಾಗಿ ಕೈ ಕೈ ಮಿಲಾಯಿಸಲೂ ಮುಂದಾದ ಇಬ್ಬರು ಮಹನೀಯರೂ ಅದನ್ನು ಉಪಯೋಗಿಸಿಯೇ ತಮ್ಮ ತಲೆ ಬೋಳಾಗಿಸಿಕೊಂಡವರು ಎಂಬುದು ಕೊನೆಯಲ್ಲಿ ಪ್ರಬಂಧ ನೀಡುವ ತಿರುವು. ಪ್ರಬಂಧದಲ್ಲಿ ಚುರುಕಾದ ಸಂಭಾಷಣೆ, ನಾಟಕೀಯ ಬೆಳವಣಿಗೆಗಳು ಓದುಗರ ಮನ ಗೆಲ್ಲುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

**ಹೊಸಕೊಡೆ** ಹೆಸರಿಸಬೇಕಾದ ಇನ್ನೊಂದು ಪ್ರಬಂಧ. ಇದರಲ್ಲೂ ಕುಡ್ಪಿಯವರ ವಿಡಂಬನಾ ಪ್ರಜ್ಞೆ ಚುರುಕಾಗಿರುವುದು ಕಂಡುಬರುತ್ತದೆ. ಭಾಷಾಬಳಕೆಯ ನೆಲೆಯಿಂದಲೂ ಇದು ಗಮನಸೆಳೆಯುತ್ತದೆ. ಹರಟೆಯ ಆರಂಭದ ಸಾಲುಗಳು ಹೀಗಿವೆ–

**'ಕೊಂಡುಕೊಂಡದ್ದು ಭಗವಾನ್‌ದಾಸ್ ನರಕ್‌ದಾಸ್ ಛತ್ರಿವಾಲರಲ್ಲಿ, ತಂದದ್ದು ಋಷಿಯ ಆಶ್ರಮದಂಥಾ ನನ್ನ ಮನೆಗೆ; ಧರಿಸಿದ್ದು ಕಲ್ಲಿನಂಥಾ ನನ್ನ ತಲೆಯು ಮೇಲೆ; ಇಳಿಸಿದ್ದು ಪರಮಾತ್ಮನ ದಿವ್ಯ ಸೃಷ್ಟಿ ಧರಣಿಗೆ; ಮತ್ತೆ ದುರಸ್ತಿ ಮಾಡಿಸಿದ್ದು ಚಿನ್ನದಂಥಾ ಮನುಷ್ಯ 'ಕೊಡೆ ರಿಪೇರಿ ಕೃಷ್ಣ'ನಲ್ಲಿ . . . . ಕಂಪೆನಿ ಆಕ್ಟಿನ ಭಾಷೆಯಂತೆ, 'ಭಗವಾನ್‌ದಾಸ್ ನರಕ್‌ದಾಸ್' ಅಂದರೆ 'ಪಾಪ–ಪುಣ್ಯ'ಗಳ ಪಚ್ಚಡಿಯೆಂದೂ; 'ಛತ್ರಿವಾಲ'ನೆಂದರೆ 'ತಲೆಯ ಮೇಲೆ ಕೆಲವು ನಿಮಿಷ ಹಿಡಿಯುವ ಕರ್ರಗಿನ ಯಾವ ವಸ್ತುವನ್ನಾದರೂ ವಿಕ್ರಯಿಸುವ ಹಕ್ಕುಳ್ಳ'ವನೆಂದೂ; ;ಋಷಿಯ ಆಶ್ರಮ'ವೆಂದರೆ ಮಿಶನ್ ಹಂಚು ಇರಿಸಲು ಹಣವಿಲ್ಲದೆ, ಇಟ್ಟ ಹುಲ್ಲು ಹಾರಿಹೋಗಿ ಸೋರುವ ಮನೆಯೆಂದೂ; 'ಕಲ್ಲಿನಂಥಾ ತಲೆ'ಯೆಂದರೆ ಕೊಡೆಯ ಅಥವಾ ಅಂತಹ ಒಂದು ವಸ್ತುವಿನ ಯೋಚನೆಯಿಂದ ಅಥವಾ ಉಷ್ಣದಿಂದ ಕೂದಲು ಪೂರ್ಣ ಕಿತ್ತುಹೋಗಿ ಜಮಾಲಾಬಾದಿನಂತೆ ನಿಂತಿರುವ ಬೋಳಾದ ತಲೆಯೆಂದೂ, 'ದಿವ್ಯಸೃಷ್ಟಿ–ಧರಣಿ'ಯೆಂದರೆ ವರುಷದ ಎಲ್ಲ ತಿಂಗಳೂ (೧೯೪೬ನೇ ಮೇಯಿಂದ ೧೯೪೭ನೇ ಎಪ್ರಿಲ್ ತನಕ) ಪ್ರತಿ ತಿಂಗಳಲ್ಲೂ ಮಳೆಬಂದ ಪುಣ್ಯಭೂಮಿ ಎಂದೂ; 'ಚಿನ್ನದಂಥಾ ಮನುಷ್ಯ' ಎಂದರೆ ಪರರ ಕೊಡೆಗಳನ್ನು ವರ್ಣಸಂಕರದಿಂದ ನಾನಾ ರೂಪಕ್ಕೆ ತಿರುಗಿಸಿ ತನ್ನ ಮುಟ್ಟಿಗೆ ಚಿನ್ನದ ಖಡಗ–ಉಂಗುರ–ಸರಪಳಿ– ಅಂಬ್ಲೆ–ಮೊದಲಾದುವನ್ನು ಮಾಡಿಸಿಕೊಂಡ ನರಪ್ರಾಣಿಯೆಂದೂ ಅರ್ಥಮಾಡಿಕೊಳ್ಳಬೇಕು."** (ಪು.೨೪–೨೫)

ಇದು ಕುಡ್ಪಿಯವರ ಬರೆವಣಿಗೆಯ ಒಂದು ಸ್ಯಾಂಪಲ್. ಇಲ್ಲಿ ವಿನೋದ, ವಿಡಂಬನೆ, ಚತುರಮತಿತ್ವ, ಲೋಕಜ್ಞಾನ ಹೀಗೆ ಹಲವು ಸಂಗತಿಗಳು ಅಡಕವಾಗಿವೆ. ಭಗವಾನ್‌ದಾಸ್ ನರಕ್‌ದಾಸ್‌ರಲ್ಲಿ ನಿರೂಪಕ ಹೊಸ ಕೊಡೆಯನ್ನು ಕೊಂಡುಕೊಳ್ಳುವಾಗ ಇದು "ನಾಲ್ಕು ತಿಂಗಳು ಬಾಳಿಕೆ ಬಂದೀತೇ?" ಎಂದು ಪ್ರಶ್ನಿಸಿದಾಗ– "ನಾಲ್ಕು ತಿಂಗಳು? ವರ್ಷ–ವರ್ಷ!" ಎಂಬ ಉತ್ತರ ಸಿಗುತ್ತದೆ. ಆದರೆ ಅದು ಬಾಳಿಕೆ ಬಂದದ್ದು ಒಂದು ಘಂಟೆ ಐವತ್ತಮೂರು ನಿಮಿಷ ಮಾತ್ರ ಎನ್ನುತ್ತ, ವ್ಯಾಪಾರಿ ವರ್ಷ ಎಂದದ್ದು 'ಮಳೆ' ಎಂಬ ಅರ್ಥದಲ್ಲಿ ಇರಬೇಕು ಎಂದು ವ್ಯಂಗ್ಯವಾಡುತ್ತಾರೆ. ಕೊಂಡ ಹೊಸಕೊಡೆಯ ಬೆಲೆ ರೂ.೭–೧೦–೦ ಆದರೆ, ಮಳೆಗಾಲದ

ಒಂದು ತಿಂಗಳಲ್ಲೇ ಅದರ ರಿಪೇರಿಗೆ ಹಾಕಿದ ಖರ್ಚು ೭೦-೧೦-೦. ಇನ್ನು ರಿಪೇರಿ ಆಗುವಾಗ ಅದಕ್ಕಾಗಿ ಕಾಯುತ್ತ ಹೋಟೆಲ್‌ನಲ್ಲಿ ಸೇವಿಸಿದ ಕಾಫಿತಿಂಡಿಯ ಖರ್ಚು, ಕೊಡೆ ಹಿಡಿದೂ ಒದ್ದೆಯಾಗಿ ಅನಾರೋಗ್ಯಕ್ಕೆ ಈಡಾಗಿ ಚಿಕಿತ್ಸೆಗೆ ಮಾಡಿದ ಖರ್ಚುಗಳನ್ನೂ ಸೇರಿಸಿದರೆ ರೂ.೧೭೦-೦.೦. ಇದರಿಂದ ನಿರೂಪಕ ಕಲಿತ ಪಾಠವೆಂದರೆ, ಕೊಡೆಯನ್ನು ಭೂಷಣವಾಗಿ ಕಂಕುಳಲ್ಲೇ ಇರಿಸಿಕೊಂಡು, ಮಳೆಬಂದರೂ ಬಿಡಿಸದಿರುವುದು. ಏಕೆಂದರೆ ಕೊಡೆ "**ಬಿಡಿಸಿದರೂ ಚಳಿಜ್ವರ, ಬಿಡಿಸದಿದ್ದರೂ ಚಳಿಜ್ವರ**".

ಈ ಸಂಕಲನದ **ಕಲ್ಕಿ ಸಂತೆಯ ಕಳ್ಳ** ಮತ್ತು **ಗ್ಲುಕೋಸ್** ಪ್ರಬಂಧಗಳೂ ಉಲ್ಲೇಖನೀಯ. ಇವೆರಡೂ ಮಹಾಯುದ್ಧ ಮತ್ತು ಆ ಯುದ್ಧದಿಂದ ಜನಜೀವನದ ಮೇಲಾದ ಪರಿಣಾಮಗಳನ್ನು ಹಿನ್ನೆಲೆಯಲ್ಲಿ ಇರಿಸಿಕೊಂಡ ಪ್ರಬಂಧಗಳಾಗಿವೆ. ಮೊದಲನೆಯ ಪ್ರಬಂಧ ವ್ಯಾಪಾರಿಯ ಮನೋವ್ಯಾಪಾರವನ್ನು ಬಯಲಿಗಿಡುತ್ತದೆ. ಯುದ್ಧದಿಂದಾಗಿ ದೈನಂದಿನ ವಸ್ತುಗಳ ಬೆಲೆ ಏರಿಕೆಯಾಗಿ, ವ್ಯಾಪಾರಿ ಅನಿರೀಕ್ಷಿತವಾಗಿ ತನ್ನಲ್ಲಿ ಸಂಗ್ರಹವಾದ ಸಂಪತ್ತಿನ ಸಂಭ್ರಮದಿಂದ ತನ್ನ ವಿಚಾರ ಮತ್ತು ಮಾತಿನ ನಡುವೆ ಸಾಂಗತ್ಯ ಕಳೆದುಕೊಂಡ ಬಗೆಯನ್ನು ವಿಡಂಬಿಸುತ್ತದೆ. ಎರಡನೆಯ ಪ್ರಬಂಧವು 'ಗ್ಲುಕೋಸ್' ಎಂಬ ವಸ್ತು ಜನರ ಜೀವನಾಡಿ, ಸರ್ವಸ್ವವೆಂಬ ಸ್ಥಾನ ಪಡೆದುದರ ವಿಡಂಬನೆ ಮತ್ತು ಕಾಳಸಂತೆಯಲ್ಲಿ ಅದನ್ನು ಕೊಳ್ಳುವ, ಮಾರುವ ಸ್ಥಿತಿಯನ್ನು ವಿವರಿಸುತ್ತ, ಗ್ಲುಕೋಸ್ 'ಸಮೂಹಸನ್ನಿ'ಯಾದ ಬಗೆಯನ್ನು ವಿಡಂಬಿಸುವ ನೆಲೆಯಲ್ಲಿ ಮೂಡಿಬಂದಿದೆ.

ಉಳಿದ ಪ್ರಬಂಧಗಳಲ್ಲಿ 'ಹರಟೆತನ' ಹೆಚ್ಚು ಇಣುಕಿದೆ. ಕುಡ್ವಿಯವರು ತಮ್ಮ ಈ ಹರಟೆಗಳ ಕುರಿತು ಹೀಗೆ ಹೇಳಿದ್ದಾರೆ. "ಇದು ಉಪೋದ್ಘಾತವಲ್ಲ. ಕಸದ ಡಬ್ಬಿಗೊಂದು ಕಸ. ಕಸವನ್ನು ಕಸವೆಂದೇ ಕರೆದಿದ್ದೇನೆ. . . . ಇವುಗಳನ್ನು ನಾನು ನನ್ನ 'ಯತ್ನ'ಗಳೆಂದಾಗಲೀ, 'ಕೃತಿ'ಗಳೆಂದಾಗಲೀ ಹೇಳುವುದಿಲ್ಲ. ಅವು ಕೇವಲ ಆಗಾಗ್ಗೆ, ಆಲಸ್ಯದ ಕ್ಷಣಗಳಲ್ಲಿ ಅಸ್ಪಷ್ಟವಾಗಿ ಮಿದುಳಿನಲ್ಲಿ ರೂಪವೆತ್ತಲು ಕಾದಾಡಿಕೊಳ್ಳುತ್ತಿದ್ದ-ಕದಡಿದ-ಕರಡು ಭಾವನೆಗಳು. ಅವುಗಳನ್ನು ನಾನು ಏಕೆ ಬರೆದೆ ಎಂಬ ಬಗ್ಗೆ ನನ್ನೊಡನೆ ವಿವರಣೆ ಇಲ್ಲ" ಎನ್ನುತ್ತಾರೆ (ಪೀಠಿಕೆ). ಅಷ್ಟೇ ಅಲ್ಲ, ಇಂತಹ ರಚನೆಗಳನ್ನು ಅವರು 'ಕಡಲ ಕರೆ'ಯಲ್ಲಿ ಓಡಾಡುವ ಮಕ್ಕಳು ತಮ್ಮ ಕೈಕಾಲುಗಳಿಂದ ನಾನಾ ಗೊಂಬೆಗಳನ್ನೂ 'ಮನೆ'ಗಳನ್ನೂ ರಚಿಸುವುದಕ್ಕೆ ಸಮಾನವಾಗಿ ಭಾವಿಸಿದ್ದಾರೆ. 'ತೆರೆಬಂದು ಮಕ್ಕಳ ಮನೆಗಳನ್ನು ಅಳಿಸುವುದು ಸಹಜ. ಹಾಗಂತ ಮಕ್ಕಳು ಮನೆ ಕಟ್ಟುವುದನ್ನು ಹೇಗೆ ಬಿಡುವುದಿಲ್ಲವೋ ಅದೇ ರೀತಿ ಸಾಹಿತ್ಯವೆಂಬ ಸಾಗರದ ಮುಂದೆ ಈ ಹರಟೆಗಳಿವೆ. ತೆರೆಯಿಂದ ದೂರವುಳಿದ ಕೆಲವು ಕೆಲಕಾಲ ಉಳಿಯುತ್ತವೆ. ದೊಡ್ಡ (ಕಲಾ)ಕೃತಿಗಳನ್ನು ಮೆಚ್ಚುವವರೂ ಕೆಲವೊಮ್ಮೆ ಇಂತಹ ಪುಟ್ಟ ರಚನೆಗಳತ್ತ ಗಮನ ಹರಿಸಬಹುದು ಅಷ್ಟು ಸಾಕು' ಎಂದು ತೃಪ್ತಿಯನ್ನು ವ್ಯಕ್ತಪಡಿಸುತ್ತಾರೆ.

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಹರಟೆಯ ಸ್ಥಾನ, ಮಹತ್ವ ಮತ್ತು ಜನಪ್ರಿಯತೆ ಏನು ಎಂಬುದನ್ನು ಮೇಲಿನ ಮಾತುಗಳು ಸೂಚಿಸುತ್ತವೆ. ಅಷ್ಟೇ ಅಲ್ಲ, ಲೇಖಕ ತನ್ನ ರಚನೆಗಳ

ಕುರಿತು ಹೊಂದಿರಬೇಕಾದ ನಿರ್ಮಮಕಾರ ಮತ್ತು ಸಮಯಪ್ರಜ್ಞೆಯನ್ನೂ ಅವರ ಮಾತುಗಳು ಸೂಚಿಸುತ್ತವೆ. ಸಂಕಲದ ೨೪ ಹರಟೆಗಳಲ್ಲಿ ಹಲವು 'ತೆರೆ'ಗೆ ಸಮೀಪದಲ್ಲಿದ್ದರೂ ಕೆಲವು ದೂರ ಉಳಿದು ಹೆಚ್ಚು ಕಾಲ ಮೆಲುಕು ಹಾಕುವಂತೆ/ ಆಸ್ವಾದಿಸುವಂತೆ ಇವೆ ಎಂಬುದು ನಿಜ. **ಆಯಾಸವಿಲ್ಲದ ಒಗಟುಗಳು** ಎಂಬ ಇನ್ನೊಂದು ಹರಟೆಯ ಸಂಕಲನ ಪ್ರಕಟವಾದ ಉಲ್ಲೇಖವಿದೆ. ಆದರೆ ಈ ಬರೆವಣಿಗೆಯ ಸಂದರ್ಭದಲ್ಲಿ ಅದು ನನಗೆ ಉಪಲಬ್ಧವಾಗಿಲ್ಲ. ಕುಡ್ಪಿಯವರ ಹಾಸ್ಯಲೇಖನ, ಕತೆಗಳು ಮತ್ತು ನಾಟಕಗಳಿಗೆ ಇಂಗ್ಲೆಂಡ್‌ನ ೨೦ನೆಯ ಶತಮಾನದ ಆರಂಭಕಾಲದ ಸುಪ್ರಸಿದ್ಧ ಹಾಸ್ಯ ಕಾದಂಬರಿಕಾರ ಪಿ.ಜಿ.ವುಡ್ ಹೌಸ್‌ನ ಬರಹಗಳು ಸ್ಫೂರ್ತಿಯಾಗಿವೆ. ವುಡ್‌ಹೌಸ್‌ನನ್ನು ಅನನ್ಯ ದೈವದಂತೆ ಕುಡ್ಪಿಯವರು ಆರಾಧಿಸುತ್ತಿದ್ದರಂತೆ. ಆತನ ಎಲ್ಲ ಕೃತಿಗಳನ್ನು ಸಂಗ್ರಹಿಸುತ್ತಿದ್ದರಂತೆ. ಅವುಗಳಿಗಾಗಿ ತಾವು ಕಾರ್ಯನಿಮಿತ್ತ ಮುಂಬಯಿ, ಬೆಂಗಳೂರಿಗೆ ಹೋದಾಗ ಎಲ್ಲೆಡೆ ಶೋಧಿಸುತ್ತಿದ್ದರಂತೆ. ಇನ್ನೂರಕ್ಕೂ ಹೆಚ್ಚು ಹಾಸ್ಯ ಕಾದಂಬರಿಗಳ ಸರದಾರ ವುಡ್‌ಹೌಸ್ ಕುಡ್ಪಿಯವರ ಸಾಹಿತ್ಯದ ಹಿಂದಿನ ಸ್ಫೂರ್ತಿಚೇತನವಾಗಿದ್ದರು.

## ಸಂಕೀರ್ಣ ಕೃತಿಗಳು

**ನಮ್ಮ ರಂಗಭೂಮಿ (೧೯೫೨)**

ರಂಗಭೂಮಿ ಕುಡ್ಪಿಯವರ ಆಸಕ್ತಿಯ ಕ್ಷೇತ್ರಗಳಲ್ಲಿ ಒಂದು. ಹವ್ಯಾಸಿ ಕಲಾವಿದರೊಂದಿಗಿನ ದೀರ್ಘ ಒಡನಾಟ, ವಿವಿಧ ನಾಟಕೋತ್ಸವಗಳ ಏರ್ಪಾಡು ಮತ್ತು ನಾಟಕ ಸ್ಪರ್ಧೆಗಳಿಗೆ ತಂಡವನ್ನು ಸಿದ್ಧಪಡಿಸುವಿಕೆ –ಮುಂತಾದ ಕಾರ್ಯಗಳನ್ನು ಕುಡ್ಪಿಯವರು ಅತ್ಯಂತ ಶ್ರದ್ಧೆಯಿಂದ ನಿರ್ವಹಿಸಿಕೊಂಡು ಬಂದವರು. ಇವು ಅವರಲ್ಲಿ ಸಮಕಾಲೀನ ರಂಗಭೂಮಿಯ ಏರಿಳಿತಗಳ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಸಾಮರ್ಥ್ಯವನ್ನು ಬೆಳೆಸಿದ್ದವು. ಇವೆಲ್ಲವುಗಳ ಫಲ 'ನಮ್ಮ ರಂಗಭೂಮಿ' ಕೃತಿಯಲ್ಲ ಒಡಮೂಡಿದೆ. "ರಂಗಭೂಮಿಯ ಸೇವೆಗೆ ಹೊರಡುವ ಉತ್ಸಾಹಿಗಳು, ಕಲೆಯ ವಿಷಯವಾಗಿ ದೊಡ್ಡ ಗ್ರಂಥಗಳಾವುದನ್ನೂ ಅಭ್ಯಸಿಸಬೇಕಾಗಿರುವ ಅವಶ್ಯಕತೆಯಿಲ್ಲ. ಆದರೆ, ಅಭಿನಯವನ್ನು ಉತ್ತಮಗೊಳಿಸಲು ಕೆಲವೊಂದು ಮುಖ್ಯ ವಿಷಯಗಳನ್ನು ಅವಶ್ಯವಾಗಿ ತಿಳಿದಿರಲೇಬೇಕು. ಅಂಥ ವಿಷಯಗಳನ್ನು ತಿಳಿದುಕೊಳ್ಳಲು ಮನಸ್ಸನ್ನು ತೆರೆವಂತೆ ಪ್ರೇರೇಪಿಸುವುದೇ ಈ ಲೇಖನಮಾಲೆಯ ಉದ್ದೇಶವಾಗಿರುತ್ತದೆ" (ಪ್ರಸ್ತಾವನೆ) ಎಂಬ ಮಾತುಗಳು ರಂಗಭೂಮಿಯ ಕುರಿತ ಅವರ ಕಾಳಜಿಗಳನ್ನು, ಹಾಗೂ ಈ ಕೃತಿರಚನೆಯ ಪ್ರೇರಣೆಯನ್ನು ವಿವರಿಸುತ್ತವೆ.

ಹಲವು ವರ್ಷಗಳಿಂದ ಕರ್ನಾಟಕದ ನೂರಾರು ನಾಟಕಗಳನ್ನು ಕಂಡ ಅನುಭವಗಳೇ ಈ ಬರೆವಣಿಗೆಯ ಮೂಲ ಆಕರ ಸಾಮಗ್ರಿಗಳಾಗಿವೆ. ವರ್ತಮಾನದಲ್ಲಿ ರಂಗಭೂಮಿಯು ಅಧೋಮುಖಿಯಾಗಿ ಚಲಿಸುತ್ತಿದೆ ಎನ್ನುವ ಕುಡ್ಪಿಯವರು, ತಮ್ಮ ಈ ಕೃತಿಯಲ್ಲಿ ಅದರ ಕಾರಣಗಳನ್ನು ಶೋಧಿಸಿದ್ದಾರೆ. ಇದರಲ್ಲಿ ಒಟ್ಟು ಇಪ್ಪತ್ತನಾಲ್ಕು ಲೇಖನಗಳಿವೆ. ಕೆಲವು ನಟ–ನಟಿಯರ ಅಭಿನಯದ ಕುರಿತು ಮಾತನಾಡಿದರೆ, ಕೆಲವು ನಾಟಕದ ಪ್ರಕಾರಗಳು ಮತ್ತು ವಸ್ತುವಿನ

ಬಗೆಗೆ ಗಮನಹರಿಸಿವೆ. ದೃಶ್ಯಾವಳಿ, ನಟ/ನಟಿಯರ ಚೆಲುವಿಕೆ, ನಾಟಕಗಳ ಪೋಷಾಕು, ಸಂಗೀತ, ನಾಟಕಗಳ ಜಾಹೀರಾತು ಇವೇ ಮುಂತಾದ ವಿಷಯ ವೈವಿಧ್ಯಗಳು ಈ ಸಂಕಲನದಲ್ಲಿವೆ. ಈ ಕೃತಿಯು ದಕ್ಷಿಣ ಕನ್ನಡದ ನಲವತ್ತು, ಐವತ್ತರ ದಶಕದ ರಂಗಭೂಮಿಯನ್ನು ಪರಿಚಯಿಸುತ್ತದೆ. ಅವುಗಳಲ್ಲಿ ಮುಖ್ಯವಾದ ಕೆಲವು ಲೇಖನಗಳು ಈ ಕೆಳಗಿನಂತಿವೆ–

**• ರಂಗಭೂಮಿಯ ಅವನತಿಗೆ ಕಾರಣಗಳು • ಈ ಕಪಿಚೇಷ್ಟೆ ಇನ್ನು ಸಾಕು •ಕಸಬರಿಗೆಯ ಹಾಸ್ಯಕ್ಕೆ ವಿರಾಮವಿರಲಿ • ಭಟ್ಟರ ಗೇಲಿ ಮಾಡುವುದೇಕೆ? • ಸ್ತ್ರೀಯರೇ ಸ್ತ್ರೀಪಾತ್ರ ಧರಿಸಬೇಕೇ? • ನಾಟಕ ರಚಯಿತರು ಮುಖ್ಯ ಪಾತ್ರವನ್ನೇ ವಹಿಸುವರೇಕೆ? • ಐತಿಹಾಸಿಕ ನಾಟಕಗಳು • ಪೌರಾಣಿಕ ನಾಟಕಗಳು •ಬಯಲಲ್ಲಿ ರಂಗಭೂಮಿಗಳು • ನಾಟಕ ಕತೆಯ ಶಿಕ್ಷಣಕ್ಕಾಗಿ ಅಭ್ಯಾಸಗೋಷ್ಠಿಗಳು**

ಕುಡ್ಪಿಯವರ ಇತರ ಬರಹಗಳಲ್ಲಿ ಸಂಪಾದಿತ ಕೃತಿಗಳು ಬರುತ್ತವೆ. ಇವರು ಸಂಪಾದಿಸಿದ **ಸರ್ವಜ್ಞನ ವಚನಗಳ ಐದು ಭಾಗಗಳು** ಒಂದಾಣೆ ಮಾಲೆಯಲ್ಲಿ ಪ್ರಕಟವಾಗಿವೆ. ಇವು ಸರ್ವಜ್ಞನ ಆಯ್ದ ವಚನಗಳ ಸಂಗ್ರಹಗಳು. ಜನರಿಗೆ ಸರ್ವಜ್ಞನ ಚಿಂತನೆಗಳನ್ನು ಮುಟ್ಟಿಸುವುದೇ ಅವುಗಳ ಮೂಲ ಆಸಕ್ತಿಯಾಗಿದೆ. ಮಕ್ಕಳಿಗಾಗಿ **ಇಸೋಫನ ಕತೆಗಳು (೧೯೫೭)** ಎಂಬ ಪುಸ್ತಕವನ್ನೂ ಅವರು ಸಂಪಾದಿಸಿದ್ದಾರೆ. ಮಕ್ಕಳನ್ನೇ ದೃಷ್ಟಿಯಲ್ಲಿರಿಸಿಕೊಂಡು ಬರೆದ ಅವರ ಇತರ ಬರೆಹಗಳಲ್ಲಿ **ಪ್ರಧಾನಾಮಾತ್ಯ ಪಂಡಿತ ಜವಾಹರಲಾಲ್ ನೆಹರು (೧೯೫೫), ನಮ್ಮ ದೇಶ (೧೯೫೬), ನಮ್ಮ ಕನ್ನಡ ನಾಡು (೧೯೫೬)** ಇವು ಸೇರಿಕೊಳ್ಳುತ್ತವೆ. ಸಿನಿಮಾ ನಟನಟಿಯರ ಸಂದರ್ಶನ ಆಧರಿತ ಲೇಖನ ಗುಚ್ಛವೇ **ಸಿನಿಮಾ ನಟರ ಪರಿಚಯ.** ಇವುಗಳೊಂದಿಗೆ **ಹಾಸವಿಲಾಸ, ಕನಕದಾಸರ ಭಜನಾಗೀತೆಗಳು** ಮತ್ತು **ನಮ್ಮ ರಂಗಭೂಮಿ** ಎಂಬ ಕಿರುಪುಸ್ತಕಗಳನ್ನು ಅವರು ಬರೆದಿರುವ ಉಲ್ಲೇಖಗಳು ಮಾತ್ರ ದೊರೆಯುತ್ತವೆ. ಕನ್ನಡ ಸಾಹಿತ್ಯದ ಜೊತೆಜೊತೆಗೆ ಕೊಂಕಣಿಯಲ್ಲಿ ಅವರು ಕೃಷಿ ಮಾಡಿದ್ದಾಗಿ ತಿಳಿದುಬರುತ್ತದೆ. 'ಭಾಂಗ್ರಾ ಗೊದ್ದಡಿ' ಮತ್ತು 'ದೊಳ್ಯಾಂ ಖೇಳು' ಅವರ ಕೊಂಕಣಿ ನಾಟಕಗಳಾಗಿವೆ.

೨೦೦೭ ಕುಡ್ಪಿಯವರ ಜನ್ಮಶತಮಾನೋತ್ಸವ ವರ್ಷವೂ ಆಗಿದೆ, ಅವರ ಎಲ್ಲ ಬರಹಗಳನ್ನು ಮತ್ತು ಕೃತಿಗಳನ್ನು ಸಂಪಾದಿಸುವ, ಪ್ರಕಟಿಸುವ ಮತ್ತು ಅಧ್ಯಯನ ಮಾಡುವ ಕಾರ್ಯಕ್ಕೆ ಈ ನೆಪದಲ್ಲಾದರೂ ಚಾಲನೆ ದೊರೆಯಲಿ. ಇದೇ ಜಿಲ್ಲೆಯ ಪಂಜೆ ಮಂಗೇಶರಾವ್, ಎಂ.ಎನ್.ಕಾಮತ್, ರಾಷ್ಟ್ರಕವಿ ಎಂ.ಗೋವಿಂದ ಪೈ ಮುಂತಾದ ಹಿರಿಯ ಬರಹಗಾರರ ಕೃತಿಗಳ ಸಮಗ್ರ ಸಂಪುಟಗಳು ಪ್ರಕಟವಾದಂತೆ ಕುಡ್ಪಿಯವರ ಸಮಗ್ರ ಬರಹಗಳನ್ನು ಸಂಪುಟರೂಪದಲ್ಲಿ ತರುವುದಕ್ಕೆ ಇದು ಸಕಾಲವಾಗಿದೆ. ಆ ಮೂಲಕ ದಕ್ಷಿಣಕನ್ನಡ ಜಿಲ್ಲೆಯ ಸಾಹಿತ್ಯ ಚರಿತ್ರೆಯಲ್ಲಿ ಕುಡ್ಪಿಯವರಿಗೆ ಸಲ್ಲಬೇಕಾದ ಸ್ಥಾನವನ್ನು ಮರುಸ್ಥಾಪಿಸಬಹುದಾಗಿದೆ.



## ಅನುಬಂಧ ೧ – ಕುಡ್ಪಿಯವರ ಬರೆಹಗಳು

**೧. ಕಥಾಸಂಕಲನಗಳು**

ಜೀವನದ ಸೊಗಸು (೧೯೩೫)

ಮೀರೆ ಮತ್ತು ನಾನು (೧೯೪೮)

ಜಪಾನ್ ಬೆಳಕು ಮತ್ತು ಇತರ ಕತೆಗಳು (೧೯೪೮)

ಮಳೆಗಾಲದ ಸ್ವಪ್ನಗಳು (೧೯೪೮)

ಪಂಡಿತನ ಪಿಟೀಲು ಮತ್ತು ಇತರ ಕಥೆಗಳು (೧೯೫೫)

ಜಾತಕ ಪಠನ ಮತ್ತು ಇತರ ಕಥೆಗಳು (೧೯೫೬)

ಈ ಯುಗದ ಠೇಂಕಾರ-ಕುಮಾರ (೧೯೫೬)

ಆದರ್ಶನೊಬ್ಬನೇ (೧೯೫೩)

ಸಾಹಸದ ಕಥೆಗಳು

ಹುಚ್ಚುಕತೆಗಳು

**೨. ನಾಟಕಗಳು**

ಪುರುಷ ವಧು (೧೯೩೬)

ನಾರೀಶ್ವರರು (೧೯೫೪)

ಬಾಬಿಗೆ ಬಾಸಿಂಗ(೧೯೫೪)

ಸತ್ಯವಂತ ಬಾಬಿ (೧೯೫೫)

ಚುನಾವಣೆ ಅರ್ಥಾತ್ ಬನಾವಣೆ (೧೯೫೪)

ನಾವು ಸಾಹುಕಾರ ಕುಲದವರು (೧೯೫೧)

ಸನ್ಯಾಸಿಯ ಗೊಂಗಡಿ (೧೯೯೬)

ವರ್ತಕ ವಿಲಾಸ (ಅಪ್ರಕಟಿತ)

ಸೈತಾನನೊಡನೆ ಕರಾರು (ಅಪ್ರಕಟಿತ)

೩. ಹರಟೆ – ★ ಕಸದ ಡಬ್ಬಿಗಳು (೧೯೪೯) ★ ಆಯಾಸವಿಲ್ಲದ ಒಗಟುಗಳು

೪. ಸಂಪಾದನೆ – ★ ಸರ್ವಜ್ಞನ ವಚನಗಳು–೧ರಿಂದ ೫ ಭಾಗಗಳು (೧೯೫೭,೧೯೫೯) ★ ಈಸೋಪನ ಕಥೆಗಳು (೧೯೫೭)

೫. ಸಂಕೀರ್ಣ– ★ ಪ್ರಧಾನಾಮಾತ್ಯ ಪಂಡಿತ ಜವಹರಲಾಲ್ ನೆಹರು (ಜೀವನ ಚರಿತ್ರೆ) (೧೯೫೫) ★ ನಮ್ಮ ದೇಶ (ಅಂಕಿ–ಸಂಖ್ಯೆಗಳ ವಿವರ) (೧೯೫೬) ★ ಹಾಸ ವಿಲಾಸ ★ ಕನಕದಾಸರ ಭಜನಾಗೀತೆಗಳು ★ ನಮ್ಮ ರಂಗಭೂಮಿ (೧೯೫೫) ★ ಕನ್ನಡ ನಾಡು (೧೯೫೬?) ★ಸಿನಿಮಾ ನಟರ ಪರಿಚಯ

***

## ಅನುಬಂಧ ೨ – ಒಂದಾಣೆ ಮಾಲೆಯ ಪ್ರಕಟಣೆಗಳು

**ಕ್ರ.ಸಂ. ಕೃತಿಯ ಹೆಸರು/ಲೇಖಕರು/ಪ್ರಕಾರ/ಪ್ರಕಟಣಾ ವರ್ಷ**

೦೧. ಕೆಪ್ಪಟೆರಾಯ ಮತ್ತು ಇತರ ಕತೆಗಳು/ಎಂ.ಎನ್.ಕಾಮತ್/ಕಥಾಸಂಕಲನ/೧೯೫೪/

೦೨. ನಾರೀಶ್ವರರು/ ಕುಡ್ಪಿ ವಾಸುದೇವ ಶೆಣೈ/ ಏಕಾಂಕ ಪ್ರಹಸನ/ನಾಟಕ /೧೯೫೪

೦೩. ಕಳ್ಳನಿಗೆ ಸಂಭಾವನೆ ಮತ್ತು ಇತರ ಕತೆಗಳು /ಸಾನೆ ಗುರುಜಿ/ ಮುಕುಲಭಾಯಿ, ಮುಕುಂದ ಭಾಯಿ ಕಥಾಸಂಕಲನ/೧೯೫೪

೦೪. ಸದ್ರಿ ಸುಬ್ಬ ಎಂ.ಎನ್. ಕಾಮತ್/ಏಕಾಂಕ ಪ್ರಹಸನ/೧೯೫೪

೦೫. ಅದ್ಭುತ ತ್ಯಾಗ ಮತ್ತು ಇತರ ಕತೆಗಳು/ಸಂಗ್ರಹ: ವೈದ್ಯಗುರು ಎಂ.ಆರ್.ಭಟ್ ಕಿರುಗತೆಗಳ ಸಂಗ್ರಹ/೧೯೫೪

೦೬. ಚುನಾವಣೆ ಅರ್ಥಾತ್ ಬನಾವಣೆ/ಕುಡ್ಪಿ ವಾಸುದೇವ ಶೆಣೈ/ನಾಟಕ /೧೯೫೪

೦೭. ಬೀಡಿ ಸೇದಬೇಡಿ ಮತ್ತು ಆ ಮಗು/ಎಂ.ಎನ್.ಕಾಮತ್/ವಿನೋದ ಕತೆ/೧೯೫೪

೦೮. ಇಂಗ್ಲಿಷ್ ಮತ್ತು ಕನ್ನಡ ಅರ್ಥಕೋಶ/ –/ ನಿಘಂಟು/ ೧೯೫೪

೦೯. ಲಂಚಕ್ಕೆ ಸಂಚಕಾರ ಮತ್ತು ಇತರ ವಿನೋದ ಕಥಾನಕಗಳು/ಡಾ.ಎಸ್.ಪಿ.ಭಟ್/ವಿನೋದ ಕತೆಗಳು/೧೯೫೪

೧೦. ಟಿಪ್ಯ್ರಾ ಔಷಧಿಗಳ ಕೈಪಿಡಿ/ಪಿ.ಎಸ್.ವೆಂಕಟಕೃಷ್ಣ ರಾವ್/ವೈದ್ಯಕೀಯ /೧೯೫೪

೧೧. ಶ್ರೀಕ್ಷೇತ್ರ ಧರ್ಮಸ್ಥಳ –ಸ್ಥಳಪುರಾಣ/೧೯೫೪

೧೨. ಜೀವನ ಮೌಲ್ಯ ಮತ್ತು ಇತರ ಕತೆಗಳು /ಎಲ್.ಎಸ್.ನಾಯಕ್/ಕಥಾಸಂಕಲನ /೧೯೫೪

೧೩. ಸತ್ತವನ ಸೇಡು ಮತ್ತು ಇತರ ಕತೆಗಳು/ಡಾ.ಪಿ.ಆರ್.ಭಟ್/ಕಥಾಸಂಕಲನ/೧೯೫೪

೧೪. ವೆಂಕಟನ ಸಂಕಟಡಾಕ್ಟರರ ಪಿರಿಖಟ್‌ತಪ್ಪು ತಪ್ಪಿಸಿದ ತಪ್ಪು/ ಸ್.ಪಿ.ಭಟ್ , ಎಂ.ಎನ್.ಕಾಮತ್ ಡಾ.ವಿ.ಆರ್.ಭಟ್/ ಏಕಾಂಕ ಪ್ರಹಸನ/೧೯೫೪

೧೫. ಬಾಬಿಗೆ ಬಾಸಿಂಗ/ಕುಡ್ಪಿ ವಾಸುದೇವ ಶೆಣೈ / ಏಕಾಂಕ ಪ್ರಹಸನ/ನಾಟಕ/ ೧೯೫೪

೧೬. ವೇಣೂರಿನ ಗತವೈಭವ/ಲೋಕನಾಥ ಶಾಸ್ತ್ರಿಸ್ಥಳಪುರಾಣ/೧೯೫೫

೧೭. ಒಗಟುಗಳು/ಟಿ.ಚಂದ್ರರಾಜ ಸೆಟ್ಟಿ/ ಸಿದ್ಧಕಟ್ಟೆ ಒಗಟುಗಳು/೧೯೫೫

೧೮. ಜಗಳಗಂಟ ಮತ್ತು ಇತರ ಕತೆಗಳು/ವೈದ್ಯಗುರು ಎಂ.ಆರ್. ಭಟ್/ಕಥಾಸಂಕಲನ/೧೯೫೫

೧೯. ರಥೋತ್ಸವ/-/ –/ /೧೯೫೫

೨೦. ಕರಿನಾಯಿ/ಎಂ.ಎನ್.ಕಾಮತ್ /ವಿನೋದಕತೆ/೧೯೫೫

೨೧. ಭಾರತದ ಮಹಾನಗರಗಳು / ಟಿ.ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ/ಸ್ಥಳ ಪರಿಚಯ/೧೯೫೫

೨೨. ತಿರುಕ್ಕುರಲ್/ ಡಿ.ಪುಟ್ಟಸ್ವಾಮಿ/ಸುಭಾಷಿತ/೧೯೫೫

೨೩. ಸೂರ್ಯನ ಸಂಸಾರ ಮತ್ತು ಇತರ ಕತೆಗಳು/ ಬಿ.ಶಂಕರ ಭಟ್ ವಿದ್ವಾನ್/ ಕಥಾಸಂಕಲನ /೧೯೫೫
೨೪. ಭಾರತದ ಮಹಾನಗರಗಳು (ದ್ವಿತೀಯ ಭಾಗ)/ ಟಿ.ಚಂದ್ರರಾಜ ಸೆಟ್ಟಿ,ಸಿದ್ಧಕಟ್ಟೆ/ಸ್ಥಳ ಪರಿಚಯ/೧೯೫೫
೨೫. ಧೈರ್ಯ ಮತ್ತು ಇತರ ಸತ್ಯ ಕಥೆಗಳು/ಎಲ್.ಎಸ್.ನಾಯಕ್/ಕಥಾಸಂಕಲನ/ ೧೯೫೫
೨೬. ಮಾರಾವತಾರ /ಜಿ.ಆರ್. ಪಾಂಡೇಶ್ವರ/ಏಕಪಾತ್ರ ಯಕ್ಷಗಾನ/೧೯೫೫
೨೭. ಹಾಸ ವಿಲಾಸ ಕುಡ್ಪಿ ವಾಸುದೇವ ಶೆಣೈ/ನಗೆಹನಿಗಳು/೧೯೫೫
೨೮. ಸತ್ಯವಂತ ಬಾಬಿ /ಕುಡ್ಪಿ ವಾಸುದೇವ ಶೆಣೈ / ಏಕಾಂಕ ಪ್ರಹಸನ/ನಾಟಕ/೧೯೫೫
೨೯. ಜಾಣ್ಮೆಯ ಒಗಟುಗಳು/ಎಂ.ಸುಬ್ರಾಯನ್/ಒಗಟು/೧೯೫೫
೩೦. ಜಾತಕ ಕತೆಗಳು/ಎಂ. ಸುಬ್ರಾಯನ್/ಕಥಾಸಂಕಲನ/೧೯೫೫
೩೧. ಕಾರ್ಕಳದ ಚರಿತ್ರೆ/ಡಿ.ಪುಟ್ಟಸ್ವಾಮಿ/ಸ್ಥಳಪುರಾಣ/೧೯೫೫
೩೨. ಮರ್ಜಿ/ಎಂ.ಎನ್.ಕಾಮತ್/ಏಕಾಂಕ ಪ್ರಹಸನ/ನಾಟಕ/೧೯೫೫
೩೩. ದರ್ಶನದ ಕತೆಗಳು/ಬಿ.ಶಂಕರ ಭಟ್ಟ ಮತ್ತು ಬಿ.ಎಂ.ಶರ್ಮಾ/ಕಥಾಸಂಕಲನ/ ೧೯೫೫
೩೪. ಅಳುವಿನ ಹೊಳೆ ಮತ್ತು ಕೇಶವ ಭೂಪ/'ನವಗಿರಿನಂದ'/ಕಥಾಸಂಕಲನ/೧೯೫೫
೩೫. ಶರಾಬಿನ ಪೀಪಾಯಿಗಳುಮೂಲ: ಟರ್ಕಿ ದೇಶದ ಕತೆ/ಬಳ್ಕೂರು ಸುಬ್ರಾಯ ಅಡಿಗ/ಅನುವಾದಿತ ಕತೆ/೧೯೫೫
೩೬. ಗುಮಾನಿ ಕವಿಯ ಉಪದೇಶ ಶತಕ/ಅಮ್ಮೆಂಬಳ ಅನಂತಯ್ಯ ನಾವಡ ಅನುವಾದ/೧೯೫೫
೩೭. ನಮಗೆ ಗೊತ್ತಿದೆಯೇ? /ಟಿ.ಚಂದ್ರರಾಜ ಸೆಟ್ಟಿ –/೧೯೫೫
೩೮. ಚತುರ ಚಮತ್ಕಾರ /ಡಾ.ಎಸ್.ಪಿಭಟ್/–/೧೯೫೫
೩೯. ಸತಿ ಸಾವಿತ್ರಿ/ಪಿ.ವೆಂಕಟರಮಣ ಭಟ್ಟ/ನಾಟಕ/೧೯೫೫
೪೦. ಆಭರಣಗಳ ಪೆಟ್ಟಿಗೆ ಮತ್ತು ಇತರ ಕತೆಗಳು /ಬಳ್ಕೂರು ಸುಬ್ರಾಯ ಅಡಿಗ/ಅನುವಾದಿತ ಕಥಾಸಂಕಲನ/೧೯೫೫
೪೧. ಭಾರತದ ಮಂತ್ರಿಮಂಡಲಗಳು/–/–/೧೯೫೫
೪೨. ಕಾಲುಬಳೆಯ ಕತೆ/ಕೆ.ಎಸ್.ರತ್ನಮ್ಮ/ಕತೆ/೧೯೫೫
೪೩. ಭಾರತದ ನಾಲ್ಕು ಕಲಶಗಳು/ಟಿ.ಚಂದ್ರರಾಜ ಶೆಟ್ಟಿಸಿದ್ದಕಟ್ಟೆ/–/೧೯೫೫
೪೪. ವ್ಯಸನದಿಂದ ಲಾಭ ಮತ್ತು ಇತರ ಕತೆಗಳು /ಎಲ್.ಎಸ್.ನಾಯಕ್/ ಕಥಾಸಂಕಲನ/೧೯೫೫
೪೫. ಸುಭಾಷಿತ/ಎಂ.ಸುಬ್ರಾಯನ್/–/೧೯೫೫
೪೬. ೧೮೫೭ ರ ಸಿಪಾಯಿದಂಗೆ/ಕೆ.ಸುಭಾಶ್ಚಂದ್ರ ಶೆಣೈ/ಇತಿಹಾಸ/೧೯೫೫
೪೭. ಅಕಾಂಡ ತಾಂಡವ/ಬಿ.ದಾಮೋದರ ಬಾಳಿಗ/ರೇಡಿಯೋ ನಾಟಕ/೧೯೫೫
೪೮. ಸಾಹಸದ ಕತೆಗಳು (ನೈಜ ಸಂಗ್ರಹ ಮತ್ತು ಅನುವಾದ)/ಕುಡ್ಪಿ ವಾಸುದೇವ ಶೆಣೈ/ಕಥಾಸಂಕಲನ/೧೯೫೫
೪೯ ಸಂಜ್ಞಾ ಜ್ಞಾನಕೋಶ ಭಾಗ ೧/ಡಾ.ಎಸ್.ಪಿ.ಭಟ್/–/೧೯೫೫
೫೦ ಪಂಡಿತನ ಪಿಟೀಲು/ಕುಡ್ಪಿ ವಾಸುದೇವ ಶೆಣೈ/ಕತೆ/೧೯೫೫
೫೧. ಭೋಗಯಾತ್ರೆ–ಆಚಾರ್ಯ ವಿನೋಬಾಭಾವೆ /ಎಲ್.ಎಸ್.ನಾಯಕ್/ ವ್ಯಕ್ತಿಚಿತ್ರ/೧೯೫೫
೫೨. ಸಂಗ್ರಾಮ ಸಿಂಹ/ಅ.ಗೌ.ಕಿನ್ನಗೋಳಿ/ಇತಿಹಾಸ /೧೯೫೫
೫೩. ಧರ್ಮಶಿಕ್ಷಾ/ಕೋ.ಶ.ಕಾರಂತ/ಧಾರ್ಮಿಕ/೧೯೫೫
೫೪. ಮಹಾತ್ಮ/ಎಲ್.ಎಸ್.ನಾಯಕ್/ಜೀವನಚಿತ್ರ/೧೯೫೫
೫೫. ಮೀರಾಬಾಯಿ ಸಂ.ಜ.ರಾವ್/ಏಕಾಂಕ ನಾಟಕ/೧೯೫೫
೫೬. ವೀರರಮಣಿ ಕರ್ಮದೇವಿ/ಕೆ.ಎಸ್.ಶರ್ಮ/ ಐತಿಹಾಸಿಕ ಕತೆ/೧೯೫೫
೫೭ ಅರಳಿದ ನಗು ಬಳ್ಕೂರು /ಸುಬ್ರಾಯ ಅಡಿಗ/ಹರಟೆ/೧೯೫೫
೫೮. ಸಚಿತ್ರ ಜಪಾನ್/ಟಿ.ರಮೇಶ್ ಪೈ/ಪ್ರವಾಸಕಥನ/೧೯೫೫
೫೯. ಚುಟ್ಟಿ ಬಿಟ್ಟಿ ಧಿಟ್ಟಿ/ಡಾ.ಎಸ್.ಪಿ. ಭಟ್/ಏಕಾಂಕ ಪ್ರಹಸನ/ನಾಟಕ/೧೯೫೫
೬೦. ನಿಪರಾಧಿ/ಎಲ್.ಎಸ್.ನಾಯಕ್/ಅನುವಾದಿತ ಕತೆ/೧೯೫೫
೬೧. ಭಕ್ತವಾಣಿ/ಎಂ.ಗೋವಿಂದ ಪೈ/–/೧೯೫೫
೬೨. ಜಾನಪದ ಸಾಹಿತ್ಯ/ಪಡಾರು ಮಹಾಬಲೇಶ್ವರ ಭಟ್/ಜನಪದ/೧೯೫೫
೬೩. ಡಾಕ್ಟರ್ ಆರೋಗ್ಯಮ್/ಕೆ.ಎನ್.ಭಟ್, ಶಿರಾಡಿಪಾಲ್/ಅನುವಾದ (ವೈದ್ಯ)/೧೯೫೫
೬೪. ಲೌಕಿಕ ನ್ಯಾಯಗಳು/ಕೆ.ಎಲ್.ಎನ್. ಉಪಾಧ್ಯಾಯ/ಸಂಪಾದನೆ/೧೯೫೫
೬೫. ಶಿಶುಪಾಲ ಮಾನಭಂಗ ಅಥವಾ ರುಕ್ಮಿಣೀ ಸ್ವಯಂವರ/ಕೆ.ಸುಭಾಷ್‌ಚಂದ್ರ ಶೆಣೈ/ಏಕಾಂಕ ನಾಟಕ/೧೯೫೫
೬೬. ಜರಾಸಂಧ ವಧೆ/ಎ.ವಿ.ಮಯ್ಯ, ಬಂಟ್ವಾಳ/ ಏಕಾಂಕ ನಾಟಕ/೧೯೫೫
೬೭. ಪ್ರಧಾನಾಮಾತ್ಯ ಪಂಡಿತ ಜವಹರಲಾಲ ನೆಹರು/ಕುಡ್ಪಿ ವಾಸುದೇವ ಶೆಣೈ/ಜೀವನಚರಿತ್ರೆ/೧೯೫೫
೬೮. ಕರುಣೆ ಮತ್ತು ಇತರ ಕತೆಗಳು/ಬಳ್ಕೂರು ಸುಬ್ರಾಯ ಅಡಿಗ/ಕಥಾಸಂಕಲನ/೧೯೫೫
೬೯. ಶ್ರೀಕ್ಷೇತ್ರ ಉಡುಪಿ/ಕೆ.ಪ್ರಭಾಕರ ರಾವ್/ಸ್ಥಳಪುರಾಣ/೧೯೫೫

೭೦. ವಿನೋದ ವಿಹಾರ/ಕುಡ್ಪಿ ವಾಸುದೇವ ಶೆಣೈ /ವಿನೋದ/೧೯೫೫
೭೧. ಭಾರತದ ಗತವೈಭವ /ಟಿ.ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ/ಇತಿಹಾಸ/೧೯೫೬
೭೨. ಸತ್ಯಹರಿಶ್ಚಂದ್ರ ವೆಂಕಟ್ರಮಣ ಭಟ್ಟ/ಏಕಾಂಕ ನಾಟಕ/೧೯೫೬
೭೩. ಸೂಕ್ತಿಗಳು/ಕೆ.ವೆಂಕಟರಾಯಾಚಾರ್ಯ/ –/೧೯೫೬
೭೪. ಉತ್ತರಕನ್ನಡ ಜಿಲ್ಲೆಯ ಯಕ್ಷಗಾನ ಕಲಾವಿದರು/ವಿಘ್ನೇಶ್ವರ ಶರ್ಮ, ತದ್ದಲಸೆ/ಪ್ರಬಂಧ /೧೯೫೬
೭೫. ದೇವರ ಸಾಮ್ರಾಜ್ಯದಲ್ಲಿ ಮತ್ತು ಇತರ ಕತೆಗಳು/ಎಸ್.ಎಸ್.ನವಕಾನ ಪೆರಡಾಲ/ಅನುವಾದಿತ ಕಥಾಸಂಕಲನ/ ೧೯೫೬
೭೬. ಕ್ರಾಂತಿ ಕಂಠೀರವ ಭಗತ ಸಿಂಘ/ಸತ್ಯಾಶ್ರಯ ಕಾಮತ್/ಜೀವನಚರಿತ್ರೆ /೧೯೫೬
೭೭. ಜಾತಕಪಠನ ಮತ್ತು ಇತರ ಕತೆಗಳು/ಕುಡ್ಪಿ ವಾಸುದೇವ ಶೆಣೈ/ಕಥಾಸಂಕಲನ /೧೯೫೬
೭೮. ಅಮೃತವಾಣಿ/ಎಂ.ಶ್ರೀಧರ ಕಿಣಿ/ಉಕ್ತಿಗಳು/ ೧೯೫೬
೭೯. ಮಾಯಾಮೃಗ/ಎ.ವಿ.ಮಯ್ಯ/ಏಕಾಂಕ ಪ್ರಹಸನ/ನಾಟಕ/೧೯೫೬
೮೦. ಡಾಕ್ಟರ್ ಗಾಂಧೀಜಿ ಅಥವಾ ನಿಸರ್ಗ ಚಿಕಿತ್ಸೆ ಮತ್ತು ಗಾಂಧೀಜಿ/ಮರಕ್ಕಿಣಿ ಶಂಕರನಾರಾಯಣ ಭಟ್/ ನಿಸರ್ಗ ವೈದ್ಯ/೧೯೫೬
೮೧. ಆದಿ ಶ್ರೀ ಶಂಕರಾಚಾರ್ಯರು/ಡಾ.ಪಿ.ಎಸ್.ವಾಸುದೇವ ಶರ್ಮ/ವ್ಯಕ್ತಿಚಿತ್ರ/೧೯೫೬
೮೨. ಆದಿ ಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು ಅರ್ಥವಿವರಸಹಿತ/ಡಾ.ಪಿ.ಎಸ್.ವಾಸುದೇವ ಶರ್ಮ/ ಧಾರ್ಮಿಕ/೧೯೫೬
೮೩. ಬೆಡಗಿನ ನಾಡು–ಕೊಡಗು/ಶ್ರೀಪತಿ ರಾವ್ ಫಲಿಮಾರ್‌ಕರ್/ಸ್ಥಳ ಪರಿಚಯ/೧೯೫೬
೮೪. ಆಮೆಯ ಚಿಪ್ಪು ಮತ್ತು ಇತರ ಸತ್ಯಕತೆಗಳು/ಎಲ್.ಎಸ್.ನಾಯಕ್/ಅನುವಾದಿತ ಕಥಾಸಂಕಲನ/೧೯೫೬
೮೫. ಮಂಗಳೂರಿನಿಂದ ಮಧುರೆಗೆ ಮತ್ತು ಭಾರತದ ಗುಹಾಲಯಗಳು/ಟಿ.ಚಂದ್ರರಾಜ ಸೆಟ್ಟಿ ಸಿದ್ಧಕಟ್ಟೆ ಪ್ರವಾಸ ಕಥನ /೧೯೫೬
೮೬. ಸತೀವೃಂದಾ ಅಥವಾ ಜಲಂಧರ ವಧೆ/ಕೆ.ಸುಭಾಷ್‌ಚಂದ್ರ ಶೆಣೈ/ಏಕಾಂಕ ನಾಟಕ/೧೯೫೬
೮೭. ಗೌತಮನ ಗೃಹತ್ಯಾಗ ಸಿದ್ಧಾರ್ಥನ ಕಾರುಣ್ಯ –ಅನಾಮಧೇಯ/–ಎಲ್.ಎಸ್.ನಾಯಕ್/ಏಕಾಂಕ ನಾಟಕಗಳು /೧೯೫೬
೮೮. ಗೃಹವೈದ್ಯ/ಬಳ್ಕೂರು ಸುಬ್ರಾಯ ಅಡಿಗ/ವೈದ್ಯ/೧೯೫೬
೮೯. ನಮ್ಮ ನಾಟಕಗಳು/ಎಂ.ಎಸ್.ಆಚಾರ್/ನಾಟಕಸಂಕಲನ/೧೯೫೬
೯೦. ಜಾನಪದ ಕತೆಗಳು/ಕೆ.ವೆಂಕಟರಾಯಾಚಾರ್ಯ/ಜಾನಪದ/೧೯೫೬
೯೧. ಕೆಲವು ಉಪಯುಕ್ತ ಸಲಹೆಗಳು/ಬಳ್ಕೂರು ಸುಬ್ರಾಯ ಅಡಿಗ/–/೧೯೫೬
೯೨. ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ/ಕೆ.ಎಲ್.ಎನ್.ಉಪಾಧ್ಯಾಯ ವಿಮರ್ಶೆ/೧೯೫೬
೯೩. ಹೋಮಿಯೋಪತಿ ಚಿಕಿತ್ಸಾಸಾರ/ಬೋಳೂರು ಎಸ್.ರಾವ್/ವೈದ್ಯ/೧೯೫೬
೯೪. ಯಕ್ಷಗಾನ ನಾಟಕದ ಪರಂಪರೆ ಮತ್ತು ಕೃತಿಗಳು/ಮಂಜುನಾಥ ಭಾಗವತ, ಕಡತೋಕ/ಯಕ್ಷಗಾನ/ ೧೯೫೬
೯೫. ಪುನರುಜ್ಜೀವನ ಗೋವಿಂದ ಭಟ್ಟ/ಏಕಾಂಕ ನಾಟಕ/೧೯೫೬
೯೬. ಪ್ರಥಮ ಚಿಕಿತ್ಸೆಯ ಕೈಪಿಡಿ/ಬೋಳೂರು ಎಸ್.ರಾವ್/ವೈದ್ಯ/೧೯೫೬
೯೭. ಹಸ್ತರೇಖಾ ವಿಜ್ಞಾನ/ ಡಾ.ಕೆ.ಕೆ.ಕಲ್ಲೂರ್/ ಜ್ಯೋತಿಷ್ಯ/೧೯೫೬
೯೮. ಸ್ವಾತಂತ್ರ್ಯ/ಕೆ.ಎಸ್.ಭಟ್, ಶಿರಾಡಿಪಾಲ್/ಅನುವಾದಿತ ಏಕಾಂಕ ನಾಟಕ/೧೯೫೬
೯೯. ಭಾರತೀಯ ಸ್ವಾತಂತ್ರ್ಯ ಸಂಗ್ರಾಮ/ಎಂ.ರಘುನಂದನ ರಾವ್, ತಲ್ಲೂರು /ಇತಿಹಾಸ/೧೯೫೬
೧೦೦. ಭಕ್ತ ಕುಚೇಲ/ಅಂಬಾತನಯ ಮುದ್ರಾಡಿ /ಏಕಾಂಕ ಸಂಗೀತ ನಾಟಕ/೧೯೫೬
೧೦೧. ಉತ್ತರನ ಪೌರುಷ ಪುಟ್ಟಣ್ಣ, ಮಂಗಳೂರು/ಯಕ್ಷಗಾನ/೧೯೫೬
೧೦೨. ಈ ಯುಗದ ಠೇಂಕಾರ-ಕುಮಾರ/ಕುಡ್ಪಿ ವಾಸುದೇವ ಶೆಣೈ/ವಿನೋದ ಕತೆ/೧೯೫೬
೧೦೩. ಕೇರಳದ ಜ್ಯೋತಿಷ ಪ್ರಮುಖ ಯೋಗಗಳು/ವೈದ್ಯಗುರು /ಪಿ.ಆರ್.ಭಟ್ ಜ್ಯೋತಿಷ್ಯ/೧೯೫೬
೧೦೪. ಒಗಟುಗಳ ಗೊಂಚಲು/ಡಾ.ಎಸ್.ಪಿ.ಭಟ್/ಒಗಟುಗಳು/೧೯೫೬
೧೦೫. ಊರ ಔಷಧಿಗಳು ಮತ್ತು ಇತರ ಉಪಯುಕ್ತ ಸೂಚನೆಗಳು/ಬೋಳೂರು ಎಸ್.ರಾವ್ ವೈದ್ಯ/೧೯೫೬
೧೦೬. ಮದ್ವೆ ಅವಾಂತರ 'ಅಷ್ಟಾವಕ್ರ' ಬೆಂಗಳೂರು/ಏಕಾಂಕ ಪ್ರಹಸನ/ನಾಟಕ /೧೯೫೬
೧೦೭. ಜಗತ್ತಿನ ವಿಜ್ಞಾನಿಗಳು/ಟಿ.ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ/ವ್ಯಕ್ತಿ ಪರಿಚಯಗಳು/೧೯೫೬
೧೦೮. ನಮ್ಮ ದೇಶ/ಕುಡ್ಪಿ ವಾಸುದೇವ ಶೆಣೈ/ಇತಿಹಾಸ/೧೯೫೬
೧೦೯. ಗ್ರಾಮ ಸ್ವಾತಂತ್ರ್ಯ /ಎ.ವಿ.ಮಯ್ಯ/ಸಾಮಾಜಿಕ ನಾಟಕ/೧೯೫೬
೧೧೦. ನಮ್ಮ ಕನ್ನಡ ನಾಡು/ಕುಡ್ಪಿ ವಾಸುದೇವ ಶೆಣೈ/ಇತಿಹಾಸ/೧೯೫೬
೧೧೧. ಭಕ್ತ ಧ್ರುವಸುಬ್ರಾಯ, ಅನಂತಪುರ/ಏಕಾಂಕ ನಾಟಕ/೧೯೫೬

೧೧೨. ಕರ್ನಾಟಕ ಕವಿಚರಿತ್ರೆ /ಬಿ.ಈಶ್ವರಯ್ಯ/ಸಾಹಿತ್ಯಚರಿತ್ರೆ/೧೯೫೬
೧೧೩. ಬೇಡನ ಮಗಳು ವೆಂಕಟರಾಜ ಪುಣಿಂಚತ್ತಾಯ/ಪೌರಾಣಿಕ ಏಕಾಂಕ ರೂಪಕ/೧೯೫೬
೧೧೪. ವಿವೇಕಾನಂದ ವಾಣಿ/ಎಂ.ಕೃಷ್ಣರಾವ್/– /೧೯೫೬
೧೧೫. ನಮ್ಮ ಆಹಾರ/ಕೆ.ಸಿ.ವೈದ್ಯರ್/ವೈದ್ಯ/೧೯೫೬
೧೧೬. ಗಾದೆಗಳು ಮತ್ತು ಜ್ಞಾನೋಕ್ತಿಗಳು/ಬೇಬಿ ಸರೋಜಿನಿ/–/೧೯೫೬
೧೧೭. ಪುರಂದರ ದಾಸರು/ಬಿ.ಪದ್ಮನಾಭ ಸೋಮಯಾಜಿ/ಏಕಾಂಕ ನಾಟಕ/೧೯೫೬
೧೧೮. ಮನುಷ್ಯ ಯಜ್ಞ/ಬಿ.ಶಂಕರ ಭಟ್ಟ/ಉಪನಿಷತ್ ಕತೆ/೧೯೫೬
೧೧೯. ಹೆಮ್ಮಕ್ಕಳ ಹಾಡುಗಳು/ಪಡಾರು ಮಹಾಬಲೇಶ್ವರ ಭಟ್ಟ/ಜನಪದ ೧೯೫೬
೧೨೦. ನಮ್ಮ ಹಬ್ಬಗಳು/ ಶ್ಯಾಮ, ಪುತ್ತೂರು/ ಜನಪದ/೧೯೫೭
೧೨೧. ವೀರಾಗ್ರಣಿ ಕರ್ಣ/ ಅಮ್ಮೆಂಬಳ ಅನಂತಯ್ಯ ನಾವಡ/ಏಕಾಂಕ ನಾಟಕ/೧೯೫೭
೧೨೨. ಸೂರ್ಯನೇ ನನಗೆ ಸಾಕ್ಷಿ ಮತ್ತು ಇತರ ಕತೆಗಳು/ಎಸ್.ಎಸ್.ನವಕಾನ ಪೆರಡಾಲ/ಕಥಾಸಂಕಲನ/೧೯೫೭
೧೨೩. ನವಕೈಲಾಸ/ಮಾಳಕೋಡ ನಾರಾಯಣ/ ಯಕ್ಷಗಾನ/೧೯೫೭
೧೨೪. ಕುಶ–ಲವ ಬಿ.ಈಶ್ವರಯ್ಯ/ಏಕಾಂಕ ಪೌರಾಣಿಕ ನಾಟಕ/೧೯೫೭
೧೨೫. ಶ್ರೀಅಮರ್ನಾಥ ಯಾತ್ರೆ/ಗುಂಡ್ಮಿ ಮಹಾಬಲ ಭಟ್ಟ/ಪ್ರವಾಸಕಥನ/೧೯೫೭
೧೨೬. ಸಂಜ್ಞಾ ಪ್ರಾಧ್ಯಾಪಕ ಮತ್ತು ಇತರ ಕತೆಗಳು/ಎಂ.ಕೃಷ್ಣರಾವ್/ಅನುವಾದಿತ ಕಥಾಸಂಕಲನ /೧೯೫೭
೧೨೭. ದ್ವಾರಕಾ ಗುಂಡ್ಮಿ ಮಹಾಬಲ ಭಟ್ಟ/ಪುರಾಣ/೧೯೫೭
೧೨೮. ಭಾರತದ ಸಂಗೀತ ಜ್ಯೋತಿಗಳು ಭಾಗ–೧/ಸುಂದರ ರಾಮರಾವ್.ಎಚ್/ವ್ಯಕ್ತಿ ಪರಿಚಯ/೧೯೫೭
೧೨೯. ಮಕ್ಕಳ ಪದ್ಯಗಳು ಅಮ್ಮೆಂಬಳ ಅನಂತಯ್ಯ ನಾವಡ/ಶಿಶುಸಾಹಿತ್ಯ/೧೯೫೭
೧೩೦. ನಯೇ ಪೈಸೆ (ದಶಮಾಂಶ ನಾಣ್ಯ ಪದ್ಧತಿ)/–/–/೧೯೫೭
೧೩೧. ತಾಯಿಗಾಗಿ ಮತ್ತು ಇತರ ಕತೆಗಳು (ಪುರಾತನ ಜೈನ ಸಾಹಿತ್ಯದಿಂದ)/ಬಿ.ಶಂಕರ ಭಟ್ಟ /ಕಥಾಸಂಕಲನ/೧೯೫೭
೧೩೨.ಸಂತ ಮೀರಾಬಾಯಿಯ ಭಜನಾ ಗೀತೆಗಳು (ರಾಗ–ತಾಳ ಸಹಿತ)/ಸುಂದರರಾಮ ರಾವ್.
ಎಚ್/ಭಜನಾಗೀತೆಗಳು/೧೯೫೭
೧೩೩. ಅಕ್ಷಯ ಪಾತ್ರೆ/ಟಿ.ಚಂದ್ರರಾಜ ಸೆಟ್ಟಿ ಸಿದ್ಧಕಟ್ಟೆ/ಮಕ್ಕಳ ನಾಟಕ/೧೯೫೭
೧೩೪.ಉತ್ತರಕನ್ನಡ ಜಿಲ್ಲೆಯ ಯಕ್ಷಗಾನ ಮಂಡಳಿಗಳು/ಮಂಜುನಾಥ ಭಾಗವತ, ಕಡತೋಕ ಪ್ರಬಂಧ/೧೯೫೭
೧೩೫. ಅಕ್ಬರ–ಬೀರಬಲ ವಿನೋದ/ಮಾಧವ ಭಟ್/ವಿನೋದ ಕತೆಗಳು/ ೧೯೫೭
೧೩೬. ವೈರಾಗ್ಯನಿಧಿ (ತರಂಗ ರೂಪಕ)/ಕೆ.ಎಸ್.ಶರ್ಮ/ರಂಗರೂಪಕ/೧೯೫೭
೧೩೭. ಭರತನ ಬಂಧುಪ್ರೇಮ/ಅಮ್ಮೆಂಬಳ ಅನಂತಯ್ಯ ನಾವಡ/ಏಕಾಂಕ ನಾಟಕ /೧೯೫೭
೧೩೮. ದ್ವಾದಶ ಜ್ಯೋತಿರ್ಲಿಂಗಗಳು/ಗುಂಡ್ಮಿ ಮಹಾಬಲ ಭಟ್ಟ/ಸ್ಥಳಪರಿಚಯ/೧೯೫೭
೧೩೯. ಪರೀಕ್ಷೆ ಮತ್ತು ಇತರ ಕತೆಗಳು/ಗೋಪಾಲಕೃಷ್ಣ ಭಟ್/ಅನುವಾದಿತಮಕ್ಕಳ ಕತೆಗಳು/೧೯೫೭
೧೪೦. ಗಿಲ್ಟ್ ಮಾಡುವ ವಿಧಾನಗಳು/ಎಂ.ಶ್ರೀನಿವಾಸ ರಾವ್/–/೧೯೫೭
೧೪೧. ಕನ್ನಡ ಗಾದೆಗಳು ಕುರಾಡಿ ಸೀತಾರಾಮ ಅಡಿಗ/ಜಾನಪದ/೧೯೫೭
೧೪೨. ಮಹಾತ್ಮಾ ವಿವೇಕ ಮಣಿಲ/ ಶಿವಶಂಕರ ಏಕಾಂಕ ನಾಟಕ/೧೯೫೭
೧೪೩. ಭಕ್ತ ಪ್ರಹ್ಲಾದ/ಎ.ವಿ.ಮಯ್ಯ/ಪೌರಾಣಿಕ ಏಕಾಂಕ ನಾಟಕ/೧೯೫೭
೧೪೪. ಘಟ್ಟಾಣಿಗಂಗೆ/ಕೆ.ಸುಭಾಷ್‌ಚಂದ್ರ ಶೆಣೈ/ಗಂಗಾನದೀ ಪರಿಚಯ/ ೧೯೫೭
೧೪೫. ಸರ್ವಜ್ಞನ ವಚನಗಳು– ಪ್ರಥಮ ಭಾಗ /ಕುಡ್ಪಿ ವಾಸುದೇವ ಶೆಣೈ/ವಚನ/೧೯೫೭
೧೪೬. ಅಭಿಮನ್ಯು ಅಥವಾ ಚಕ್ರವ್ಯೂಹ/ಬಿ.ಈಶ್ವರಯ್ಯ/ಪೌರಾಣಿಕ ಏಕಾಂಕ ನಾಟಕ/೧೯೫೭
೧೪೭. ಗಾನಕುಸುಮ/ಕೆ.ಎಸ್.ಪದ್ಮನಾಭ ಆಚಾರ್ಯ/ಮಕ್ಕಳ ಹಾಡು/೧೯೫೭
೧೪೮. ಚಾಣಕ್ಯಶತಕ –ಭಾಗ ೧(ಕನ್ನಡ ಅರ್ಥಸಹಿತ)/ಡಾ.ಟಿ.ಪಿ.ಭಟ್/ ಶತಕ/೧೯೫೭
೧೪೯. ಚಾಣಕ್ಯಶತಕ –ಭಾಗ ೨(ಕನ್ನಡ ಅರ್ಥಸಹಿತ)/ಡಾ.ಟಿ.ಪಿ.ಭಟ್/ಶತಕ/೧೯೫೭
೧೫೦. ವರಕವಿ ಮುದ್ದಣ ಟಿ.ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ/ಕವಿಪರಿಚಯ /೧೯೫೭
೧೫೧. ಲೋಕಮಾನ್ಯ ಬಾಲಗಂಗಾಧರ ತಿಲಕ/ಎಂ.ರಘುನಂದನ ರಾವ್/ವ್ಯಕ್ತಿಚಿತ್ರ/೧೯೫೭
೧೫೨. ಮಚ್ಚೆ (ಸ್ತ್ರೀಯರ ಮತ್ತು ಪುರುಷರ ಮೇಲೆ ಅವರ ಪರಿಣಾಮ)/ ವೈದ್ಯಗುರು ಎಂ.ಆರ್.ಭಟ್/
ಜ್ಯೋತಿಷ್ಯ/ ೧೯೫೭
೧೫೩. ಭಾರತದ ವೀರನಾರಿಯರು/–/ಐತಿಹಾಸಿಕ ಕತೆಗಳು/೧೯೫೭
೧೫೪. ಮೂಕರಾಣಿಸಾಮ್ರಾಟ ವಿಕ್ರಮಾದಿತ್ಯನ ಒಂದು ಕಥೆ/–/ಕತೆ/೧೯೫೭
೧೫೫. ಅಷ್ಟಾವಕ್ರ ಮತ್ತು ನಿವೃತ್ತಿಸುತ/ವೈದ್ಯಗುರು ಎಂ.ಆರ್.ಭಟ್/ಎರಡು ಸಣ್ಣಕತೆಗಳು/೧೯೫೭
೧೫೬. ನಮ್ಮ ಮೈಸೂರು ರಾಜ್ಯ/–/ಐತಿಹಾಸಿಕ /೧೯೫೭
೧೫೭. ವಿಷಬೀಜ ಕೆ.ಗೋವಿಂದ ಭಟ್ಟ/ಪೌರಾಣಿಕ /ಏಕಾಂಕ ನಾಟಕ/೧೯೫೭

೧೫೯. ಮೈಸೂರು ರಾಜ್ಯದ ಪ್ರೇಕ್ಷಣೀಯ ಸ್ಥಳಗಳು/ವೈ.ಮಹಾಲಿಂಗ ಭಟ್ಟ/ಪ್ರವಾಸಕಥನ/೧೯೫೭

೧೬೦. ಬಲಿಬಂಧನ/ಎಸ್.ತಿರುಮಲೇಶ್ವರ ಭಟ್/ಪೌರಾಣಿಕ ಏಕಾಂಕ ನಾಟಕ/೧೯೫೭

೧೬೧. ವೀರ ಜನನಿ ಎಸ್.ಗೋಪಿಚಂದ ರಾವ್/ಗೀತನಾಟಕ/೧೯೫೭

೧೬೨. ವಿಷದ ಅಂಗಿ ಮತ್ತು ಇತರ ಕತೆಗಳು/ಅಮ್ಮೆಂಬಳ ಅನಂತಯ್ಯ ನಾವಡ/ಕಥಾಸಂಕಲನ/೧೯೫೭

೧೬೩. ಶಕುಂತಲಾ ಬಿ.ಈಶ್ವರಯ್ಯ/ಪೌರಾಣಿಕ ನಾಟಕ/೧೯೫೭

೧೬೪. ಶ್ರೀ ಪುರಂದರ ದಾಸರ ಭಜನಾಗೀತೆಗಳು-ಭಾಗ ೧/ಎಚ್.ಸುಂದರರಾಮ ರಾವ್/ಕೀರ್ತನೆಗಳು/೧೯೫೭

೧೬೫. ಪಂಚಕನ್ಯೆಯರು ಮತ್ತು ಚಿರಂಜೀವಿಗಳು/ ಸಿ.ಗೋಪಾಲಕೃಷ್ಣಾಚಾರ್ಯ/ವ್ಯಕ್ತಿಚಿತ್ರಗಳು/೧೯೫೭

೧೬೬. ರುಕ್ಮಾಂಗದ/ಅಂಬಾತನಯ ಮುದ್ರಾಡಿ/ಸಂಗೀತ ಏಕಾಂಕ ನಾಟಕ /೧೯೫೭

೧೬೭. ಇಸೋಫನ ಕತೆಗಳು- ಭಾಗ ೧/ಕುಡ್ಪಿ ವಾಸುದೇವ ಶೆಣೈ/ಕಥಾಸಂಕಲನ /೧೯೫೭

೧೬೮. ಶ್ರೀ ಕನಕದಾಸರ ಭಜನಾಗೀತೆಗಳು/ಕುಡ್ಪಿ ವಾಸುದೇವ ಶೆಣೈ/ಕೀರ್ತನೆ ೧೯೫೮

೧೬೯. ಶ್ರೀ ಸೋದೆಮಠದ ವಾದಿರಾಜ ಸ್ವಾಮಿಗಳ ಭಜನಾಗೀತೆಗಳು/ಎಚ್.ಸುಂದರರಾಮ ರಾವ್ (ರಾಗ-ತಾಳ ಸಂಯೋಜನೆ) ಕೀರ್ತನೆ/೧೯೫೮

೧೭೦. ಮಾಣಿಯ ಮಡದಿ ಮಕ್ಕಳು ಮತ್ತು ಕನ್ನಡದ ಕಪಿಗಳಿಗೆ ಕಿಪಿಮಾತು/ರಸಿಕ ಪುತ್ತಿಗೆ/ ಕತೆ /೧೯೫೮

೧೭೧. ನಮ್ಮ ವೇದಗಳು ಗುಂಡ್ಮಿ ಮಹಾಬಲ ಭಟ್ಟ/ವೇದಪರಿಚಯ/೧೯೫೮

೧೭೨. ಪಂಚತಂತ್ರದ ಕತೆಗಳು/ಕೆ.ವೆಂಕಟಾಚಾರ್ಯ/ಅನುವಾದಿತ ಕಥಾಸಂಕಲನ/೧೯೫೮

೧೭೩. ಶ್ರೀ ತ್ಯಾಗರಾಜರ ಕೀರ್ತನೆಗಳು/ಎಚ್.ಸುಂದರರಾಮ ರಾವ್/ಕೀರ್ತನೆ/೧೯೫೮

೧೭೪. ಸತ್ಯಭಾಮಾ ಗರ್ವಭಂಗ/ಸಿ.ಗೋಪಾಲಕೃಷ್ಣಾಚಾರ್ಯ/ಸಂಗೀತ ಏಕಾಂಕ ನಾಟಕ/೧೯೫೮

೧೭೫. ಹರಿದಾಸರ ಕೀರ್ತನೆಗಳು/ಕೆ.ವೆಂಕಟಾಚಾರ್ಯ/ಕೀರ್ತನೆ/೧೯೫೮

೧೭೬. ಶರಸೇತು ನಾರಾಯಣ/ಏಕಾಂಕ ದೃಶ್ಯರೂಪಕ/೧೯೫೮

೧೭೭. ಮಂಗಳ-ಅವಮಂಗಳ/ಏರ್ಯ ಚಂದ್ರಭಾಗಿ ರೈ/ನೀಳ್ಗತೆ/೧೯೫೮

೧೭೮. ದೀಪಾವಳಿ /ಕುಡ್ಪಿ ಚಂದ್ರಕಾಂತ ಶೆಣೈ/ಏಕಾಂಕ ನಾಟಕ/೧೯೫೮

೧೭೯. ಶಂಭುಕ ವಧೆ/ವೀ.ಬೀ.ಮಧುರಂ/ಏಕಾಂಕ ನಾಟಕ/೧೯೫೮

೧೮೦. ರಾಜಾ ಭರ್ತೃಹರಿ ರಸಿಕ ಪುತ್ತಿಗೆ/ಏಕಾಂಕ ನಾಟಕ/೧೯೫೮

೧೮೧. ಜಯಸಿಂಹ ವಿಜಯ ಮತ್ತು ಜಯಸಿಂಹ ಚರಿತ್ರೆ/ಮೈರ್ಪಾಡಿ ವೆಂಕಟರಮಣಯ್ಯ/ಯಕ್ಷಗಾನ/೧೯೫೮

೧೮೨. ಶಲ್ಯಾವಸಾನ/ಬಳಕಿಲ ವಿಷ್ಣ್ವಯ್ಯ/ಯಕ್ಷಗಾನ/೧೯೫೮

೧೮೩. ಭರ್ತೃಹರಿಯ ನೀತಿಶತಕ-ಭಾಗ೧/ರಸಿಕ ಪುತ್ತಿಗೆ/ಶತಕ/೧೯೫೮

೧೮೪. ಭರ್ತೃಹರಿಯ ನೀತಿಶತಕ-ಭಾಗ೨/ರಸಿಕ ಪುತ್ತಿಗೆ/ಶತಕ/೧೯೫೮

೧೮೫. ಭರ್ತೃಹರಿಯ ನೀತಿಶತಕ-ಭಾಗ೩/ರಸಿಕ ಪುತ್ತಿಗೆ/ಶತಕ/೧೯೫೮

೧೮೬. ಶರಶಯ್ಯೆ ಬಳ್ಕುಂಜೆ ವೆಂಕಟ್ರಾಯ /ಆನಂದ ಶೆಣೈ/ಏಕಾಂಕ ನಾಟಕ/೧೯೫೮

೧೮೭. ಶ್ರೀ ಕನಕದಾಸರು/ಪಿ.ಪದ್ಮನಾಭ ಸೋಮಯಾಜಿ/ಏಕಾಂಕ ನಾಟಕ/೧೯೫೮

೧೮೮. ರಾಮರಾಜ್ಯದ ಮಡಿವಾಳ/ವಿ.ಮಹಾಲಿಂಗ ಭಟ್ಟ/ಏಕಾಂಕ ರೇಡಿಯೊ ನಾಟಕ/೧೯೫೮

೧೮೯.* ಶ್ರೀ ಶಂಕರಾಚಾರ್ಯ ವಿರಚಿತ ವಿವೇಕ ಚೂಡಾಮಣಿ/ಕೆ.ಆತ್ಮಾರಾಮ ಶಾಸ್ತ್ರಿ, /ಪುತ್ತೂರುಧಾರ್ಮಿಕ/೧೯೫೮

೧೯೧. ಭಸ್ಮಾಸುರ ಮೋಹಿನಿ/ಸಿ.ಗೋಪಾಲಕೃಷ್ಣ ಆಚಾರ್ಯ/ಏಕಾಂಕ/೧೯೫೮

೧೯೨. ಗೋಪಾಲನ ಸ್ವಾಮ್ಯ/ಪಡಾರು ಮಹಾಬಲೇಶ್ವರ ಭಟ್ಟ/ಏಕಾಂಕ ಪ್ರಹಸನ /೧೯೫೮

೧೯೩. ಮೊಗಲರು ಎ.ಎಸ್.ಎ.ರಮಣ,/ ಉಡುಪಿ ಇತಿಹಾಸ/೧೯೫೮/

೧೯೪. ಕಾರುಣ್ಯಮೂರ್ತಿ ಯೇಸು/ಸತ್ಯಾಶ್ರಯ ಕಾಮತ್/ಧಾರ್ಮಿಕ/೧೯೫೮

೧೯೫. ಮಹಾಪುರುಷರ ಬಾಲ್ಯಸ್ಮೃತಿಗಳು- ಭಾಗ ೧/ಎ.ಅನಂತಯ್ಯ ನಾವಡ/ವ್ಯಕ್ತಿಚಿತ್ರಗಳು/ ೧೯೫೮

೧೯೬. ನರವೀರ ನೃಪತುಂಗ/ಯು.ಶ್ರೀನಿವಾಸ ರಾವ್/ಐತಿಹಾಸಿಕ ನಾಟಕ/ ೧೯೫೮

೧೯೭. ಫಲೋದಯ ಅಥವಾ ಗಿರಿಜಾಕಲ್ಯಾಣ ಎಂ.ಗೋಪಾಲಕೃಷ್ಣ ಭಟ್ಟ/ಏಕಾಂಕ ನಾಟಕ/೧೯೫೮

೧೯೮. ಭಾರತೀಯ ಕಣ್ಮಣಿಗಳು-ಭಾಗ೧/ರಾಮಣ್ಣ ಚಡಗ ಪಿ./ವ್ಯಕ್ತಿಚಿತ್ರಗಳು/೧೯೫೮

೧೯೯. ಭಾರತೀಯ ಕಣ್ಮಣಿಗಳು ಭಾಗ೨/ಪಿ.ರಾಮಣ್ಣ ಚಡಗ/ವ್ಯಕ್ತಿಪರಿಚಯ/೧೯೫೮

೨೦೦.ಮಾಯಾವಿನಿ ಅಥವಾ ಶೂರ್ಪನಖಾ ಮಾನಭಂಗ/ಗೋಪಾಲಕೃಷ್ಣ ಭಟ್ಟ, ಎಡನಾಡು/ಏಕಾಂಕ ನಾಟಕ /೧೯೫೮

೨೦೧. ತತ್ಸಮ ತದ್ಭವ ಕೋಶ-ಭಾಗ ೧/ಚಂದ್ರಶೇಖರ ಚಡಗ/ಕೋಶ/೧೯೫೮

೨೦೨. ಧರ್ಮಸಂಕಟ ಅಥವಾ ಕರ್ಣ/ವಿಘ್ನೇಶ್ವರ ಶರ್ಮ, ತಪ್ಪಲಸೆ/ಪೌರಾಣಿಕ ಏಕಾಂಕ ನಾಟಕ /೧೯೫೮

೨೦೩. ಅಹಲ್ಯೋದ್ಧಾರ ಅಂಬಾತನಯ ಮುದ್ರಾಡಿ/ಪೌರಾಣಿಕ ಏಕಾಂಕ ನಾಟಕ /೧೯೫೮

೨೦೪. ಸಲೀಮ/ಎಂ.ಗೋಪಾಲಕೃಷ್ಣ ಭಟ್ಟ / ಐತಿಹಾಸಿಕ ಏಕಾಂಕ ನಾಟಕ/೧೯೫೮

೨೦೫. ಯಮಲೋಕ ಯಾತ್ರೆ ಅಥವಾ ನಚಿಕೇತ ವೆಂಕಟರಾಜ ಪುಣಿಂಚತ್ತಾಯ/ಉಪನಿಷತ್ ಕತೆ/ರೂಪಕ/೧೯೫೮

೨೦೬. ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ ಜೀವನಚರಿತ್ರೆ ಮತ್ತು ಕೆಲವು ಭಜನಾಗೀತೆಗಳು/ಬೆಳ್ಳಿ ಭುಜಂಗ ರಾವ್/ಭಜನಾಗೀತೆ/೧೯೫೮
೨೦೭. ಸಹದೇವ ವಿಜಯ ಆಡೂರು ಬಳಕಿಲ /ವಿಷ್ಣ್ವಯ್ಯ/ಯಕ್ಷಗಾನ/೧೯೫೮
೨೦೮. ಸತೀಮಣಿ ಸಾವಿತ್ರಿ ಎಂ.ಎಸ್.ಆಚಾರ್/ಕತೆ/೧೯೫೮
೨೦೯. ಡಾಕ್ಟರ್ ಬಾಬು ರಾಜೇಂದ್ರ ಪ್ರಸಾದ/ಪಿ.ರಾಮಣ್ಣ ಚಡಗ/ವ್ಯಕ್ತಿಚಿತ್ರ/೧೯೫೮
೨೧೦. ಶತಪಥ ಬೋಧಾಮೃತ/ವಿಶ್ವೇಶ್ವರ ಶರ್ಮ/–/೧೯೫೮
೨೧೧. ಅಕಬರ್ ಬೀರಬಲ್ ಪ್ರಶ್ನೋತ್ತರ/ಬಳ್ಕೂರು ಸುಬ್ರಾಯ ಅಡಿಗ/ಕತೆ/೧೯೫೮
೨೧೨. ದಲಿತೋದ್ಧಾರ/ಎಸ್.ತಿರುಮಲೇಶ್ವರ ಭಟ್/ಸಾಮಾಜಿಕ ಏಕಾಂಕ ನಾಟಕ /೧೯೫೮
೨೧೩. ತತ್ಸಮ ತದ್ಭವ ಕೋಶ–ಭಾಗ೨/ಪಿ.ರಾಮಣ್ಣ ಚಡಗ/೧೯೫೮
೨೧೪. ನಯಸೇನನ ಧರ್ಮಾಮೃತ ದರ್ಶನ/ಕೆ.ಎಸ್.ಭಟ್/ಧಾರ್ಮಿಕ/೧೯೫೮
೨೧೫. ಕಬೀರ ವಚನ ಸಂಗ್ರಹ–(ಮೂಲ ಹಿಂದೀ ವಚನಗಳೊಂದಿಗೆ)/ಎಸ್.ಸೂರ್ಯನಾರಾಯಣನ್/ವಚನ/೧೯೫೮
೨೧೬. ಸುಧನ್ವ /ಪಿ.ಎಸ್.ಗಣಪಯ್ಯ/ಪೌರಾಣಿಕ ಏಕಾಂಕ ನಾಟಕ/೧೯೫೮
೨೧೭. ಚಾಳುಕ್ಯ ವಿಕ್ರಮಾಂಕ ಮತ್ತು ಶ್ರೀಕೃಷ್ಣ ದೇವರಾಯ/ಕೆ.ವೆಂಕಟರಾಯಾಚಾರ್ಯ/ಕತೆಗಳು/೧೯೫೮
೨೧೮. ದಳವಾಯಿ ಏಗ್ಗಣ/ಡಿ.ಕೃಷ್ಣರಾವ್/ಏಕಾಂಕ ನಾಟಕ/೧೯೫೯
೨೧೯. ಮುದ್ದಣ–ಮನೋರಮೆ/ಬಿ.ಪದ್ಮನಾಭ ಸೋಮಯಾಜಿ/ಗದ್ಯಕಾವ್ಯ/೧೯೫೯
೨೨೦. ಶ್ರೀ ಕೈಲಾಸ–ಮಾನಸ ಸರೋವರ ಯಾತ್ರೆ–ಭಾಗ ೧/ಎಂ.ವೆಂಕಟಾಚಲ ಭಟ್ಟ/ಪ್ರವಾಸಕಥನ/೧೯೫೯
೨೨೧. ಶ್ರೀ ಕೈಲಾಸ–ಮಾನಸ ಸರೋವರ ಯಾತ್ರೆ–ಭಾಗ ೨/ಎಂ.ವೆಂಕಟಾಚಲ ಭಟ್ಟ/ಪ್ರವಾಸಕಥನ/೧೯೫೯
೨೨೨. ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ ಭಜನಾಗೀತೆಗಳು/ಬೆಳ್ಳಿ ಭುಜಂಗ ರಾವ್/ ಭಜನಾಗೀತೆಗಳು/೧೯೫೯
೨೨೩. ನಾಡಗೀತೆಗಳು–ಭಾಗ ೧/ಸಂಜೀವ ಶೆಟ್ಟಿ/–/೧೯೫೯
೨೨೪. ನಾಡಗೀತೆಗಳು–ಭಾಗ ೨/ಸಂಜೀವ ಶೆಟ್ಟಿ/–/೧೯೫೯
೨೨೫. ಕೇನೋಪನಿಷತ್ (ತಾತ್ಪರ್ಯಸಹಿತ)/ಕೋ.ಶ.ಕಾರಂತ/ಆಧ್ಯಾತ್ಮಿಕ /೧೯೫೯
೨೨೬. ವಿದೂಷಕ ತೆನ್ನಾಲಿ ರಾಮಕೃಷ್ಣ/ಪಿ.ರಾಮಣ್ಣ ಚಡಗ/ಕಥಾಸಂಕಲನ/೧೯೫೯
೨೨೭. ಕಾಳಿದಾಸನ ಮಾಲವಿಕಾಗ್ನಿಮಿತ್ರ–ಭಾಗ ೧ /ಈಳಂತೋಡಿ ರಾಮಕೃಷ್ಣ ಭಟ್ಟ/ಕಾವ್ಯ ವಿಮರ್ಶೆ/೧೯೫೯
೨೨೮. ಕಾಳಿದಾಸನ ಮಾಲವಿಕಾಗ್ನಿಮಿತ್ರ–ಭಾಗ ೨/ಈಳಂತೋಡಿ ರಾಮಕೃಷ್ಣ ಭಟ್ಟ/ಕಾವ್ಯ ವಿಮರ್ಶೆ/೧೯೫೯
೨೨೯. ಮಹಮ್ಮದ್ ಪೈಗಂಬರ/ಕೆ.ಆತ್ಮಾರಾಮ ಶಾಸ್ತ್ರಿ/ಜೀವನಚರಿತ್ರೆ/೧೯೫೯
೨೩೦. ಇಸ್ಲಾಮ್ ಕೆ.ಆತ್ಮಾರಾಮ ಶಾಸ್ತ್ರಿ/ಧಾರ್ಮಿಕ/೧೯೫೯
೨೩೧. ತ್ಯಾಗಶಿರೋಮಣಿ ಜಿಮೂತವಾಹನ/ಜಿ.ಈಶ್ವರಯ್ಯ/ಏಕಾಂಕ ನಾಟಕ/೧೯೫೯
೨೩೨. ಶ್ರೀರಾಮ ರಾಜ್ಯಾಭಿಷೇಕ/ಈಶ್ವರ ಪಾಂಡೇಲು/ಪೌರಾಣಿಕ ಏಕಾಂಕ ನಾಟಕ /೧೯೫೯
೨೩೩. ಶ್ರಿ ಶಂಕರಾಚಾರ್ಯ ವಿರಚಿತ ವಿವೇಕ ಚೂಡಾಮಣಿ (ಭಾವಾರ್ಥ ಸಂಗ್ರಹ ಭಾಗ ೨)/ –/ಆಧ್ಯಾತ್ಮಿಕ /೧೯೫೯
೨೩೪. ಸಂತ ಜ್ಞಾನೇಶ್ವರ (ಅನುವಾದ)/'ಸಂತ ಶರಣ'/ಜೀವನಚರಿತ್ರೆ/೧೯೫೯
೨೩೫. ಜ್ಞಾನೇಶ್ವರಿ 'ಸಂತ ಶರಣ'/ಅನುವಾದ/೧೯೫೯
೨೩೬. ವಿಭೀಷಣ ಶರಣಾಗತಿ/ಎಂ.ಗೋಪಾಲಕೃಷ್ಣ ಭಟ್ಟ/ಏಕಾಂಕ ನಾಟಕ/೧೯೫೯
೨೩೭. ಈಶಾವಾಸ್ಯೋಪನ್ನಿಷತ್/ಕೋ.ಶ.ಕಾರಂತ /ಆಧ್ಯಾತ್ಮಿಕ/೧೯೫೯
೨೩೮. ಬೀರಬಲನ ಜಾಣ್ಮೆ 'ಕುಶ' ಮಂಗಳೂರು ಕಥಾಸಂಕಲನ/೧೯೫೯
೨೩೯. ಸರ್ವಜ್ಞನ ವಚನಗಳು– ಭಾಗ ೨ /ಕುಡ್ಪಿ ವಾಸುದೇವ ಶೆಣೈ/ವಚನ/೧೯೫೯
೨೪೦. ಬಾಲ ಪದ್ಯಾವಳಿ ಅಮ್ಮೆಂಬಳ ಅನಂತಯ್ಯ ನಾವಡ/ಮಕ್ಕಳ ಹಾಡು/೧೯೫೯
೨೪೧. ಗೀತಗೋವಿಂದ – ಭಾಗ ೧/ಕೆ.ಎ.ದೇವದಾಸ/ಕನ್ನಡ ಗದ್ಯ/೧೯೫೯
೨೪೨. ಗೀತಗೋವಿಂದ – ಭಾಗ ೨/ಕೆ.ಎ.ದೇವದಾಸ/ಕನ್ನಡ ಗದ್ಯ/೧೯೫೯
೨೪೩. ಗೀತಗೋವಿಂದ –ಭಾಗ ೩/ಕೆ.ಎ.ದೇವದಾಸ/ಕನ್ನಡ ಗದ್ಯ/೧೯೫೯
೨೪೪. ಗೀತಗೋವಿಂದ –ಭಾಗ ೪/ಕೆ.ಎ.ದೇವದಾಸ/ಕನ್ನಡ ಗದ್ಯ/೧೯೫೯
೨೪೫. ಕಥಾಕುಸುಮ ಮಂಜರಿ /ಸಿ.ಗೋಪಾಲಕೃಷ್ಣಾಚಾರ್ಯ/ನೀತಿಕತೆಗಳು/೧೯೫೯
೨೪೬. ವಿದುರನೀತಿ ಭಾಗ–೧/ರಸಿಕಪುತ್ತಿಗೆ/ಅನುವಾದ /೧೯೫೯
೨೪೭. ವಿದುರನೀತಿ ಭಾಗ–೨/ರಸಿಕಪುತ್ತಿಗೆ/ಅನುವಾದ /೧೯೫೯
೨೪೮. ವಿದುರನೀತಿ ಭಾಗ–೩/ರಸಿಕಪುತ್ತಿಗೆ/ಅನುವಾದ /೧೯೫೯
೨೪೯. ವಿದುರನೀತಿ ಭಾಗ–೪/ರಸಿಕಪುತ್ತಿಗೆ/ಅನುವಾದ /೧೯೫೯
೨೫೦. ನಗೆಗಡಲು ಗೋಪೀಚಂದರಾವ್/ಹಾಸ್ಯಬರಹ/೧೯೫೯

೨೫೧. ಭಟ್ಕಳ ಅಪ್ಪಯ್ಯ ದೀಕ್ಷಿತರ ಕೀರ್ತನೆಗಳು/ಸಂತಶರಣ/ಕೀರ್ತನೆಗಳು/೧೯೫೯
೨೫೨. ಅಂಗದನ ರಾಯಭಾರ/ಬಿ.ಈಶ್ವರಯ್ಯ/ಏಕಾಂಕ ನಾಟಕ/೧೯೫೯
೨೫೩. ಪಂಚತಂತ್ರದ ಗೆಳೆಯರುಭಾಗ ೧/ಅಮ್ಮೆಂಬಳ ಅನಂತಯ್ಯ ನಾವಡ/ ಕತೆ/೧೯೫೯
೨೫೪. ಪಂಚತಂತ್ರದ ಗೆಳೆಯರುಭಾಗ ೨/ಅಮ್ಮೆಂಬಳ ಅನಂತಯ್ಯ ನಾವಡ/ ಕತೆ/೧೯೫೯
೨೫೫. ವೈರಾಗ್ಯ ಶತಕ (ಅಪ್ಪಯ್ಯ ದೀಕ್ಷಿತಕೃತ) ಕೆ.ವೆಂಕಟರಾಯಾಚಾರ್ಯ/ಆಧ್ಯಾತ್ಮಿಕ/೧೯೫೯
೨೫೬. ಮೂರು ಕಿರುನಾಟಕಗಳು/ಸಿ.ಎಂ.ಶಾಸ್ತ್ರಿ, ಪುಣಚ/ನಾಟಕ/೧೯೫೯
೨೫೭. ಅಭಿನಯ ಗೀತಾವಳಿ/ಹೊಸಬೆಟ್ಟು ವೆಂಕಟರಮಣಯ್ಯ/ಮಕ್ಕಳ ಹಾಡು/೧೯೫೯
೨೫೮. ಸರ್ವಜ್ಞನ ವಚನಗಳು- ಭಾಗ೩/ಕುಡ್ಪಿ ವಾಸುದೇವ ಶೆಣೈ/ವಚನ /೧೯೫೯
೨೫೯. ಹರಿಪಾಠ ಸಂತಶರಣ/ಅನುವಾದ/೧೯೫೯
೨೬೦. ಅಮ್ಬಾಷ್ಟಕಮ್ (ಶ್ರೀ ಶಂಕರಾಚಾರ್ಯ ವಿರಚಿತ)/ಕನ್ನಡ ತಾತ್ಪರ್ಯ ಸಹಿತ/ಡಾ.ಎನ್.ವಿ.ಉಪಾಧ್ಯಾಯ/ ಅನುವಾದ/೧೯೫೯
೨೬೧. ಇಚ್ಛಾಮರಣಿ/'ವಿಚಿತ್ರ'ಏತಡ್ಕ/ಪೌರಾಣಿಕ /ಏಕಾಂಕ ನಾಟಕ/೧೯೫೯
೨೬೨. ಭಕ್ತ ಮಾರ್ಕಂಡೇಯ/ಅಡೂರು ಬಳಕಿಲ ವಿಷ್ಣ್ವಯ್ಯ/ಯಕ್ಷಗಾನ /೧೯೫೯
೨೬೩. ವೀರ ಮಕರಾಕ್ಷ/ಅಡೂರು ಬಳಕಿಲ ವಿಷ್ಣ್ವಯ್ಯ/ಯಕ್ಷಗಾನ/೧೯೫೯
೨೬೪. ಬಾಲರ ಬಾನುಲಿ/ಎ.ಶ್ರೀನಿವಾಸ ಭಟ್/ಕವನಸಂಕಲನ/೧೯೬೦
೨೬೫. ಸ್ವಾಮಿ ವಿವೇಕಾನಂದ/ಪಿ.ರಾಮಣ್ಣ ಬಡಗ/ಜೀವನಚರಿತ್ರೆ/೧೯೬೦
೨೬೬. ರಣಮಲ್ಲ /ವಿಜಯ ಜಿ.ಕೆ.ಆಚಾರ್ಯ/ಐತಿಹಾಸಿಕ ಏಕಾಂಕ ನಾಟಕ /೧೯೬೦
೨೬೭. ಜಾಪಾನಿ ಕೃಷಿ ವಿಜಯ/ಮಣೆಲ ಶಿವಶಂಕರ/ಯಕ್ಷಗಾನ/೧೯೬೦
೨೬೮. ಪಟಾಕಿ ಮತ್ತು ಇತರ ಹರಟೆಗಳು/ಎಂ.ವಿ.ಪ್ರಭು/ಹರಟೆ/೧೯೬೦
೨೬೯. ಶ್ರೀಮಚ್ಛಂಕರಾಚಾರ್ಯ ವಿರಚಿತ ಆತ್ಮಬೋಧ/ಕೋ.ಶ.ಕಾರಂತ/ಆಧ್ಯಾತ್ಮ/೧೯೬೦
೨೭೦. ಹರಿದಾಸರ ಕೀರ್ತನೆಗಳು ಭಾಗ ೧/ಕೆ.ವೆಂಕಟರಾಯಾಚಾರ್ಯ/ ನುಡಿಮುತ್ತು/೧೯೬೦
೨೭೧. ಹರಿದಾಸರ ಕೀರ್ತನೆಗಳುಭಾಗ ೨/ಕೆ.ವೆಂಕಟರಾಯಾಚಾರ್ಯ/ನುಡಿಮುತ್ತು/ ೧೯೬೦
೨೭೨. ಚಂಡಿ ಎಂ.ಕೆ.ಬೇಲಕರ/ಏಕಾಂಕ ನಾಟಕ/೧೯೬೦
೨೭೩. ಧರ್ಮಸ್ಥಾಪನೆ/ಎಸ್.ರಾಮಭಟ್ಟ/ಏಕಾಂಕ ನಾಟಕ/೧೯೬೦
೨೭೪. ಇದ್ದವರು ಮೂವರು/ಎಂ.ಎನ್.ಕಾಮತ್ ಏಕಾಂಕ/೧೯೬೦
೨೭೫. ಎಳೆಯರ ಗೆಳೆಯ ಪಿ.ಸೀತಾರಾಮ ಭಟ್ಟ/ಮಕ್ಕಳ ಹಾಡು/೧೯೬೦
೨೭೬. ಬೆಟ್ಟಯ್ಯನ ಗುಡಿಗೆ/ಡಿ.ಮಹಾಲಿಂಗ ಭಟ್ಟ/ರೇಡಿಯೋ ಏಕಾಂಕ ನಾಟಕ/೧೯೬೦
೨೭೭. ತಿಲೋತ್ತಮೆ ಅಥವಾ ಸುಂದೋಪಸುಂದ/ರಸಿಕ ಪುತ್ತಿಗೆ/ಏಕಾಂಕ ನಾಟಕ ೧೯೬೦
೨೭೮. ವಿಹಾರವಾಟಿಕೆ/ಅಂಬಾತನಯ ಮುದ್ರಾಡಿ/ಕಾವ್ಯ/೧೯೬೦
೨೭೯. ಜೀಮೂತವಾಹನ /ಡಿ.ಮಹಾಲಿಂಗ ಭಟ್ಟ/ಏಕಾಂಕ ನಾಟಕ/೧೯೬೦
೨೮೦.ಶ್ರೀ ಜಗನ್ನಾಥದಾಸ ವಿರಚಿತ ಹರಿಕಥಾಮೃತಸಾರ-ಭಾಗ ೧ /ಸಿ.ಗೋಪಾಲಕೃಷ್ಣ ಆಚಾರ್ಯ/ಆಧ್ಯಾತ್ಮಿಕ/ ೧೯೬೦
೨೮೧. ಶ್ರೀ ಜಗನ್ನಾಥದಾಸ ವಿರಚಿತ ಹರಿಕಥಾಮೃತಸಾರ-ಭಾಗ ೨/ಸಿ.ಗೋಪಾಲಕೃಷ್ಣ ಆಚಾರ್ಯ/ ಆಧ್ಯಾತ್ಮಿಕ/೧೯೬೦
೨೮೨. ಶುಭಶಕುನ/ಡಿ.ಮಹಾಲಿಂಗ ಭಟ್ಟ/ಏಕಾಂಕ ಪ್ರಹಸನ/ನಾಟಕ/೧೯೬೦
೨೮೩. ನವಜೀವನ/ಎಸ್.ತಿರುಮಲೇಶ್ವರ ಭಟ್ಟ/ಸಾಮಾಜಿಕ ಏಕಾಂಕ ನಾಟಕ/೧೯೬೦
೨೮೪. ಮರವು ಮರೆವು/ರಸಿಕ ಪುತ್ತಿಗೆ/ವಿನೋದ/೧೯೬೦
೨೮೫. ಶ್ರೀ ಗಿಂತ ಧೀ ಮೇಲು/ಕೆ.ಎಸ್.ಪದ್ಮನಾಭಾಚಾರ್ಯ/ಏಕಾಂಕ ನಾಟಕ/೧೯೬೦
೨೮೬. ವೀರ ಜಟಾಯು/ರಸಿಕ ಪುತ್ತಿಗೆ/ಪೌರಾಣಿಕ ಏಕಾಂಕ ನಾಟಕ/೧೯೬೦
೧೯೮೭.ರಾಣಿ ಅಬ್ಬಕ್ಕ ದೇವಿ/ಪ್ರಭಾಕರ ರಾವ್ ಕೆ.ಪಿ. ಹತ್ಯಡ್ಕ/ಏಕಾಂಕ ೧೯೬೦
೨೮೮. ಏಕದಂತ ಎಸ್.ಮಹಾಲಿಂಗ ಭಟ್ಟ/ಪೌರಾಣಿಕ ನಾಟಕ/೧೯೬೦
೨೮೯. ಸತೀ ಅನಸೂಯ / ರಸಿಕ ಪುತ್ತಿಗೆ/ಏಕಾಂಕ ನಾಟಕ/೧೯೬೦
೨೯೦. ಭಕ್ತ ಶಬರ/ಉಳ್ಳೂರು ತಮ್ಮಯ್ಯ ಪಾಟಾಳಿ/ಯಕ್ಷಗಾನ/೧೯೬೦
೨೯೧. ದೇವರ ನ್ಯಾಯ/ವಿ.ಎ.ಶೆಣೈ,ಮಜಂಬೈ ಕತೆ/೧೯೬೦
೨೯೨. ಮಹಿಷಾಸುರ ವಧೆ/ಕೆ.ಅನಂತರಾಮರಾವ್/ಪೌರಾಣಿಕ ಏಕಾಂಕ ನಾಟಕ/೧೯೬೦
೨೯೩. ಮಹಾಭಿನಿಷ್ಕ್ರಮಣ/ ಭಾಗ ೧/ಎಂ.ಕೆ.ಬೇಲಕರ/ಚಾರಿತ್ರಿಕ ಏಕಾಂಕ ನಾಟಕ೧೯೬೦
೨೯೪. ಮಹಾಭಿನಿಷ್ಕ್ರಮಣ/ ಭಾಗ ೨/ಎಂ.ಕೆ.ಬೇಲಕರ/ಚಾರಿತ್ರಿಕ ಏಕಾಂಕ ನಾಟಕ೧೯೬೦

೨೯೫. ಅಹಲ್ಯಾ ಶಾಪ/ಸಿ.ಗೋಪಾಲಕೃಷ್ಣ ಆಚಾರ್ಯ/ಪೌರಾಣಿಕ ಏಕಾಂಕ ನಾಟಕ/೧೯೬೦
೨೯೬. ಅಣಿಲೇಕಾಯಿ/ಕವಿರಾಜ ಪಿ.ವಿ.ನಾಯಕ್/ಆಯುರ್ವೇದ/೧೯೬೦
೨೯೭. ಶ್ರೀ ರಾಮಾನುಗ್ರಹ/ಪಿ.ಎಸ್.ಗಣಪಯ್ಯ/ಪೌರಾಣಿಕ ಏಕಾಂಕ ನಾಟಕ/೧೯೬೦
೨೯೮. ಕಾಳಿದಾಸ/ ಎಂ.ಕೆ.ಬೇಲಕರ/ಏಕಾಂಕ ನಾಟಕ/೧೯೬೦
೨೯೯. ಸಂತ ಜ್ಞಾನೇಶ್ವರ /ಕೋ.ಶ.ಕಾರಂತ/ಜೀವನಚರಿತ್ರೆ/೧೯೬೦
೩೦೦. ಗೋವಾ ದುರಂತ /ನ.ನಾರಾಯಣ ಶೆಟ್ಟಿ/ಯಕ್ಷಗಾನ/೧೯೬೧
೩೦೧. ಕೀಚಕ/ಎಸ್.ತಿರುಮಲೇಶ್ವರ ಭಟ್/ಪುರಾಣಿಕ ಏಕಾಂಕ ನಾಟಕ/೧೯೬೧
೩೦೨. ಅರಸಿನ (ಹಲ್ದಿ)/ಕವಿರಾಜ ಪಿ.ವಿ.ನಾಯಕ್/ಆಯುರ್ವೇದ/೧೯೬೧
೩೦೩. ಭೀಷ್ಮ–ಅಂಬೆ ಅಥವಾ ತೀರದ ಛಲ/'ವಿಚಿತ್ರ'ಏತಡ್ಕ/ಪೌರಾಣಿಕ ಏಕಾಂಕ ನಾಟಕ/೧೯೬೧
೩೦೪. ಶ್ರೀಮತಿಯ ಸ್ವಯಂವರ/ಎಂ.ಎಸ್.ಆಚಾರ್/ಪೌರಾಣಿಕ ಏಕಾಂಕ ನಾಟಕ/೧೯೬೧
೩೦೫. ಎಲ್ಲಿ ಪ್ರೇಮವೋ ಅಲ್ಲಿ ದೇವರು/ಎಂ.ಕೆ.ಬೇಲಕರ ಏಕಾಂಕ ನಾಟಕ/೧೯೬೧
೩೦೬. ಸುಭದ್ರಾ ಪರಿಣಯ/ಅಡೂರು ಬಳಕಿಲ ವಿಷ್ಣ್ವಯ್ಯ/ಯಕ್ಷಗಾನ/೧೯೬೧
೩೦೭. ಮಧ್ಯಮ ವ್ಯಾಯೋಗ/ಎಸ್.ತಿರುಮಲೇಶ್ವರ ಭಟ್/ಪೌರಾಣಿಕ ಏಕಾಂಕ ನಾಟಕ/೧೯೬೧
೩೦೮. ಪಂಚಾಂಗ ರಹಸ್ಯ ಶ್ರೀಪತಿ ನರಸಿಂಹ ಅಡಿಗ/–/೧೯೬೧
೩೦೯. ಅಗ್ನಿ ಪರೀಕ್ಷೆ/ರಸಿಕ ಪುತ್ತಿಗೆ/ಪೌರಾಣಿಕ ಏಕಾಂಕ ನಾಟಕ/೧೯೬೧
೩೧೦. ಜರಾಸಂಧ ವಧೆ /ಅಡೂರು ಬಳಕಿಲ ವಿಷ್ಣ್ವಯ್ಯ/ಯಕ್ಷಗಾನ/೧೯೬೧
೩೧೧. ತ್ರಿಶಂಕು ಸ್ವರ್ಗ/ಶ್ಯಾಮರಾಯ ಎ.ಪಿ.ಪಣಕಜೆ/ಯಕ್ಷಗಾನ/೧೯೬೧
೩೧೨. ಮಹಾಪುರುಷರ ನುಡಿಮುತ್ತುಗಳು/ಸುಬ್ರಹ್ಮಣ್ಯ ಆಚಾರ್ಯ/–/೧೯೬೧
೩೧೩. ಬಾಲಗಾನ ಸೊಡಂಕೂರು ಗರಡಿ ಸುಬ್ಬಣ್ಣ ಭಟ್ಟ/ಕಾವ್ಯ/೧೯೬೧
೩೧೪. ಸತ್ಕಾರ/ಎಂ.ಕೆ.ಬೇಲಕರ/ಸಾಮಾಜಿಕ ಏಕಾಂಕ ನಾಟಕ/೧೯೬೧
೩೧೫. ಆದರ್ಶ ವಿದ್ಯಾರ್ಥಿ /ಪಿ.ಬಾಲಚಂದ್ರ ರಾವ್, ಅಡ್ಯನಡ್ಕ/ ಏಕಾಂಕ/೧೯೬೧
೩೨೧. ಉತ್ತರ ಕುಮಾರ /ಪಿ. ಯಂ.ರಾವ್, ವಿದ್ವಾನ್/ಪೌರಾಣಿಕ ಏಕಾಂಕ/೧೯೬೧
೩೨೩. ಅಬ್ರಹಾಂ ಲಿಂಕನ್ /ಕಾ.ಶ.ನಾ.ಭ/ಪರಿಚಯ/೧೯೬೧
೩೨೪. ರಸಬಿಂದು 'ವಿಚಿತ್ರ'ಏತಡ್ಕ/ಚುಟುಕು/೧೯೬೧
೩೨೫.* ಬುನಾದಿ ಹಾಡುಗಳು/ಕೊಣಾಜೆ ಶಂಕರ ಭಟ್ಟ, ಅಸೈಗೋಳಿ/ಹಾಡುಗಳು/ ೧೯೬೧
೩೨೮.* ಪರಿವಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ ಭಜನಾಗೀತೆಗಳು– ಭಾಗ ೪/ಬೆಳ್ಳೆ ಭುಜಂಗ ರಾವ್ ಭಜನಾಗೀತೆ/೧೯೬೧
೩೨೯. ಶಿಕ್ಷಣ ಪರೀಕ್ಷೆ/ಎಂ.ಎನ್.ಕಾಮತ್/ಏಕಾಂಕ ಪ್ರಹಸನ/ನಾಟಕ/೧೯೬೧
೩೩೦. ಹರಿಣಿ/ಎಂ.ಶಂಕರ ನಾರಾಯಣ ಭಟ್ಟ/ಏಕಾಂಕ/೧೯೬೧
೩೩೧. ಬಸುರಿಯ ಹಾಡು ಮತ್ತು ಶ್ರೀಕೃಷ್ಣ –ಸತ್ಯಭಾಮಾ ಸಂವಾದ/ಪಡಾರು ಮಹಾಬಲೇಶ್ವರ ಭಟ್ಟ ಜಾನಪದ/೧೯೬೧
೩೩೨. ಕೈವಲ್ಯೋಪನಿಷತ್/ಕೋಟ ಶಂಕರನಾರಾಯಣ ಕಾರಂತ/ಅನುವಾದ/೧೯೬೧
೩೩೩. ಸುಂದೋಪಸುಂದ ಅಥವಾ ತಿಲೋತ್ತಮೆ/ಸಿ.ಗೋಪಾಲಕೃಷ್ಣ ಆಚಾರ್ಯ ಪೌರಾಣಿಕ ಏಕಾಂಕ ನಾಟಕ / ೧೯೬೧
೩೩೪. ಶ್ರೀ ಮಧ್ವಾದಿರಾಜರು/ನಾರಳಮಠ ಅನಂತ ಉಪಾಧ್ಯಾಯ/ಜೀವನಚರಿತ್ರೆ/ ೧೯೬೨
೩೩೫. ಅಲೆಗ್ಸಾಂಡರ್/ಸಿ.ಗೋಪಾಲಕೃಷ್ಣ ಆಚಾರ್ಯ/ಐತಿಹಾಸಿಕ ಏಕಾಂಕ ನಾಟಕ/೧೯೬೨
೩೩೬. ಸೂರ್ಯವಿಜ್ಞಾನ ಅಥವಾ ಯೌಗಿಕ ಚಮತ್ಕಾರ– ಭಾಗ ೧/ಮಹಾಮಹೋಪಾಧ್ಯಾಯ ಶ್ರೀಗೋಪಿ ನಾಥ ಕವಿರಾಜ /ಯೋಗ/೧೯೬೨
೩೩೭. ಸೂರ್ಯವಿಜ್ಞಾನ ಅಥವಾ ಯೌಗಿಕ ಚಮತ್ಕಾರ– ಭಾಗ ೨/ಮಹಾಮಹೋಪಾಧ್ಯಾಯ ಶ್ರೀಗೋಪಿ ನಾಥ ಕವಿರಾಜ/ಯೋಗ/೧೯೬೨
೩೩೮. ಕಸ್ತೂರಿ ಮಿಶ್ರಣ/ಡಿ.ಮಹಾಲಿಂಗ ಭಟ್ಟ / ರೇಡಿಯೋ ಪ್ರಹಸನ/ ೧೯೬೨
೩೩೯. ಭೋಜರಾಜನ ಕತೆಗಳು/ಎಂ.ಗೋಪಾಲಕೃಷ್ಣ ಭಟ್/ಕಥಾಸಂಕಲನ/೧೯೬೨
೩೪೦. ಕುಂಭಮೇಳ/ಮಧುರಂಗ/ಏಕಾಂಕ/೧೯೬೨
೩೪೧. ಗಣಪತ್ಯುಪನಿಷತ್ /ಕೋ.ಶ.ಕಾರಂತ/ಕನ್ನಡ ವ್ಯಾಖ್ಯಾನ/೧೯೬೨
೩೪೨. ಅಂಗುಲಿಮಾಲನ್/ಕೆ.ಭೋಜ ಪೂಜಾರಿ/ ಏಕಾಂಕ/೧೯೬೨

## 'ನಾಡಿಗೆ ನಮಸ್ಕಾರ' ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆ

### ಮಹಾಪೋಷಕರು

೧. ರಾಜರ್ಷಿ ಡಾ|| ಡಿ. ವೀರೇಂದ್ರ ಹೆಗ್ಗಡೆಯವರು, ಶ್ರೀಕ್ಷೇತ್ರ ಧರ್ಮಸ್ಥಳ

೨. ಧರ್ಮದರ್ಶಿ ಶ್ರೀ ಹರಿಕೃಷ್ಣ ಪುನರೂರು, 'ಶುಭವಾಗಲಿ', ಮುಲ್ಕಿ

೩. ಶ್ರೀ ಸದಾನಂದ ಸುವರ್ಣ, 'ಸುವರ್ಣಗಿರಿ', ಅಬ್ಬಕ್ಕ ನಗರ, ಮಂಗಳೂರು

೪. ಡಾ. ಯು. ಪಿ. ಉಪಾಧ್ಯಾಯ, ಮಜೂರು, ಕಾಪು.

೫. ಶ್ರೀ ಸಿ. ಕೆ. ಪಡಿವಾಳ್, ಪಡಿವಾಳ್ ರೆಸ್ಟೋರೆಂಟ್, ಮೂಡಬಿದಿರೆ.

೬. ಡಾ|| ಎಚ್. ಶಾಂತಾರಾಮ್, ಆಡಳಿತಾಧಿಕಾರಿಯವರು, ಅಕಾಡೆಮಿ ಆಫ್ ಜನರಲ್ ಎಜ್ಯುಕೇಶನ್, ಅನಂತನಗರ, ಮಣಿಪಾಲ

೭. ಶ್ರೀ ಆನಂದಕೃಷ್ಣ, ಚೌಟ ಪ್ರತಿಷ್ಠಾನ (ರಿ.), ಬೆಂಗಳೂರು

೮. ಶ್ರೀ ಎಂ. ಕೆ. ರವೀಂದ್ರಕುಮಾರ್, ಎಡ್ವೋಕೇಟ್, ಬೆಂಗಳೂರು

೯. ಶ್ರೀ ಕಿರಣ. ಎನ್. ಬಿ. ( ಬೋಳಂತ ಕೋಡಿ) ಕರಂಗಲಪಾಡಿ, ಮಂಗಳೂರು

೧೦. ಶ್ರೀ ಕೆ. ಶ್ಯಾಮಸುಂದರ್, ಇಂಡಸ್ಟ್ರಿಯಲಿಸ್ಟ್, ವಿಜಯನಗರ, ಬೆಂಗಳೂರು

೧೧. ಡಾ|| ಪಳ್ಳತಡ್ಕ ಕೇಶವ ಭಟ್ಟ, ಚರ್ಚ್ ರೋಡು, ಮಣಿಪಾಲ

೧೨. ಶ್ರೀ ಜಿ. ರಾಮಕೃಷ್ಣ ಆಚಾರ್, ಎಸ್.ಕೆ. ಎಫ್. ಎಜ್ಯುಕೇಶನ್ ಫೌಂಡೇಶನ್, ಮೂಡಬಿದ್ರೆ

೧೩. ಶ್ರೀಮತಿ ಆನಂದಿ ಸದಾಶಿವ ರಾವ್, ಹಿರಿಯ ಲೇಖಕಿ, ಮಂಗಳೂರು.

೧೪. 'ನವಯುಗ'ದ ಹೊನ್ನಯ ಶೆಟ್ಟಿ ಸ್ಮಾರಕ ಟ್ರಸ್ಟ್, C/o ಶ್ರೀಮತಿ ಉಷಾ ಪಿ. ರೈ, ಹಿರಿಯ ಲೇಖಕಿ, ಬೆಂಗಳೂರು.

೧೫. ಶ್ರೀ ಪಳಕಳ ರಘುಪತಿ ಭಟ್ ಮತ್ತು ಸಹೋದರರು, ಮೂಡಬಿದಿರೆ.

೧೬. ಶ್ರೀ ಎ. ವಿ. ನರಸಿಂಹಮೂರ್ತಿ, ಉದ್ಯಮಿಕ್ಕಿ, ಕಳಸ

೧೭. ಶ್ರೀ ಸುದರ್ಶನ ಎನ್. ಮೊಗಸಾಲೆ, ಡೈರೆಕ್ಟರ್, ಜಿಯೋಮೆಟ್ರಿಕ್ ಸಾಫ್ಟ್‌ವೇರ್, ಸೊಲ್ಯೂಷನ್ಸ್ ಲಿಮಿಟೆಡ್, ಪುಣೆ.

೧೮. ಶ್ರೀ ಎ. ಮಾಧವ ಉಡುಪ, 'ಕೃಷ್ಣ ಕುಟೀರ', ಸಾಲಿಗ್ರಾಮ, ಉಡುಪಿ ಜಿಲ್ಲೆ.

## ಪೋಷಕರು

೧. ಅಕಾಡಮಿ ಆಫ್ ಜನರಲ್ ಎಜ್ಯುಕೇಶನ್, ಮಣಿಪಾಲ
೨. ಶ್ರೀ ಜಿ. ಭೀಮೇಶ್ವರ ಜೋಶಿ, ಧರ್ಮಕರ್ತರು, ಶ್ರೀ ಆದಿಶಕ್ತ್ಯಾತ್ಮಕ ಅನ್ನಪೂರ್ಣೇಶ್ವರಿ ದೇವಸ್ಥಾನ, ಹೊರನಾಡು, ಚಿಕ್ಕಮಗಳೂರು.
೩. ಶ್ರೀ ಕೆ. ಗೋವಿಂದದಾಸ್, 'ಗೋವಿಂದ ಭವನ', ಸುರತ್ಕಲ್, ದ.ಕ.
೪. ಶ್ರೀ ಶಾಂತಾರಾಮ ಚಿಪಳೂಣಕರ್, ನಿವೃತ್ತ ತಹಶೀಲ್ದಾರರು, ಮಾಳ.
೫. ಡಾ. ಕೆ. ತಿಮ್ಮಪ್ಪ ರೈ, ಕೆದಂಬಾಡಿ ಮೆಡಿಕಲ್ ಡಿಸ್ಪೆನ್ಸರಿ, ವಿಟ್ಲ.
೬. ಶ್ರೀ ಕೆ. ಸಿ. ವಿರೂಪಾಕ್ಷ, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಮಂಗಳೂರು.
೭. ಶ್ರೀಮತಿ ಸಂಧ್ಯಾ, ವಸಂತಕುಮಾರ ರಾವ್ 'ಸುಜಿತ್ ಫಾರ್ಮ್ಸ್',ಕೈಕಂಬ
೮. ಶ್ರೀ ಜನಾರ್ದನ ಗುರ್ಕಾರ್, ಹಿರಿಯ ಸಾಹಿತಿ, ಮೈಸೂರು.
೯. ಕಾಂತಾವರ ಮಂಚದ ಬೈಲು, ಕೆ. ಕೆ. ರಾಮಚಂದ್ರರಾವ್ ಸ್ಮಾರಕ ಟ್ರಸ್ಟ್, ಮಂಡ್ಯ
೧೦. ಕಾಂತಾವರ 'ಕೃಷ್ಣ ಕೃಪಾ', ಶ್ರೀಮತಿ ಮತ್ತು ಶ್ರೀ ಅಚ್ಚಣ್ಣ ಶೆಟ್ಟಿ, ಸ್ಮಾರಕ ಟ್ರಸ್ಟ್
೧೧. ಶ್ರೀಮತಿ ಸಬಿತ - 'ಯಕ್ಷಾನುಗ್ರಹ', ಪಡೀಲ್, ಮಂಗಳೂರು
೧೨. ಶ್ರೀ ಸಿ.ಎ. ಶೆಟ್ಟಿ, ಹೋಟೇಲ್ ಅರವಿಂದ್, ಸಾಂತಾಕ್ರೂಜ್, ಮುಂಬೈ
೧೩. ಡಾ. ವೀಣಾ ಆನಂದ್, ಟೆಕ್ಸಾಸ್ ಯು.ಎಸ್.ಎ.
೧೪. ಡಾ. ವೀಣಾ ಎಸ್. ಇಸಳೂರ, ಸಹ್ಯಾದ್ರಿ ಆಸ್ಪತ್ರೆ, ಶಿವಮೊಗ್ಗ
೧೫. ಶ್ರೀ ಕೃಷ್ಣಮೂರ್ತಿ ಉಪಾಧ್ಯ, ಬೆಂಗಳೂರು

## ಪ್ರೋತ್ಸಾಹಕರು

೧. ಶ್ರೀ ಶ್ರೀಪತಿ ಭಟ್, ಧನಲಕ್ಷ್ಮೀ ಕ್ಯಾಶ್ಯೂ ಎಕ್ಸ್‌ಪೋರ್ಟ್, ಮೂಡಬಿದಿರೆ.
೨. ಶ್ರೀ ಪದ್ಮರಾಜ ಹೆಗ್ಡೆ, ಉಳಿರೋಡಿ ಮನೆ, ಕಾಂತಾವರ.
೩. ಶ್ರೀ ಶ್ರೀಪತಿ ಮಂಜನಬೈಲ್, ಪ್ರಸಿದ್ಧ ರಂಗಕರ್ಮಿ, ಬೆಳಗಾಂ.
೪. ಪಾವೆಂ ವಿಶ್ವಸ್ಥ ಸಮಿತಿ, ಹುಬ್ಬಳ್ಳಿ

# ನಾಡಿಗೆ ನಮಸ್ಕಾರ

## ಮೊದಲ ಕಂತಿನ ಹತ್ತು ಕೃತಿಗಳು

# ನಾಡಿಗೆ ನಮಸ್ಕಾರ

## ಎರಡನೇ ಕಂತಿನ ಹತ್ತು ಕೃತಿಗಳು

# ಕಾಂತಾವರ ಕನ್ನಡ ಸಂಘದ ಮಾದರಿ*

ಕರ್ನಾಟಕದ ಮಟ್ಟಿಗೆ ಇದು ಪರ್ವಕಾಲ. ಕನ್ನಡ ನಾಡು ಉದಯವಾಗಿ ಈಗ 50 ವರ್ಷ ಕಳೆದಿದ್ದರೂ 'ಸುವರ್ಣ ವರ್ಷಾಚರಣೆ' ಈಗ ಚಾಲ್ತಿಯಲ್ಲಿ ಇದೆ. ಈ ಸವಿನೆನಪನ್ನು ಅನೇಕರು ಅನೇಕ ರೀತಿಯಲ್ಲಿ ದಾಖಲೆ ಮಾಡುತ್ತಾರೆ. ಆದರೆ, ದಕ್ಷಿಣ ಕನ್ನಡ ಜಿಲ್ಲೆಯ ಕಾಂತಾವರ ಕನ್ನಡ ಸಂಘ ಇಡೀ ರಾಜ್ಯಕ್ಕೇ ಮಾದರಿ ಎನ್ನುವಂಥ ಕೆಲಸವೊಂದನ್ನು ಮಾಡುತ್ತಿದೆ.

ಕಾಸರಗೋಡೂ ಸೇರಿದಂತೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ 30 ಮಂದಿ ಮಹಾನುಭಾವರನ್ನು ಗುರುತಿಸಿ ಅವರ ಪರಿಚಯದ ಪುಟ್ಟ ಪುಸ್ತಿಕೆಗಳನ್ನು ಸಂಘ, ತುಂಬ ಅಚ್ಚುಕಟ್ಟಾಗಿ ಹೊರತರಲು ಯೋಚಿಸಿದೆ. ಈ ಎಲ್ಲ ಪುಸ್ತಕಗಳ ಗಾತ್ರ, ಬೆಲೆ ಒಂದೇ ಇದೆ. 48 ಪುಟಗಳ 33 ರೂಪಾಯಿ ಬೆಲೆಯ ಈ ಪುಸ್ತಿಕೆಗಳು ದ.ಕ. ಜಿಲ್ಲೆಯ 'ಪುಣ್ಯ ಪುರುಷರ' ಮಾಲಿಕೆಯಾಗಿ ರೂಪುಗೊಂಡಿವೆ. ಉತ್ತರ ಕರ್ನಾಟಕದಲ್ಲಿ ಕೆಲವು ವೀರಶೈವ ಮಠಗಳು ಇಂಥ ಪುಣ್ಯಪುರುಷರ ಮಾಲಿಕೆಯನ್ನು ಹೊರತಂದಿವೆ. ಆದರೆ, ಒಂದು ಚಿಕ್ಕ ಊರಿನ ಕನ್ನಡ ಸಂಘ ಈ ಕೆಲಸ ಮಾಡಿರುವುದು ಬೆರಳು ಕಚ್ಚುವಂಥ ಸಾಧನೆ.

ಕಾಂತಾವರ ಕನ್ನಡ ಸಂಘ ಇಂಥ ಸಾಧನೆಗಳನ್ನು ಹಿಂದೆಯೂ ಮಾಡಿದೆ. ಈಗ ಸಂಘಕ್ಕೆ ಮೂವತ್ತರ ಯೌವನ. ಉಡುಪಿ ಜಿಲ್ಲೆಯ ಕಾರ್ಕಳ ಬಳಿಯ ಕಾಂತಾವರ ಕನ್ನಡ ಸಂಘ ತನ್ನ ಕ್ರಿಯಾಶೀಲ ಚಟುವಟಿಕೆಗಳಿಂದ ತಾನು ಹುಟ್ಟಿದ ಚಿಕ್ಕ ಊರಿನ ಸೀಮೆಗಳನ್ನೆಲ್ಲ ಉಲ್ಲಂಘನೆ ಮಾಡಿ ನಾಡಿನಾದ್ಯಂತ ಹೆಸರು ಮಾಡಿದೆ. ಸಂಘಕ್ಕೆ 25 ವರ್ಷ ತುಂಬಿದ್ದಾಗ ಹೊರತಂದ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' ಎಂಬ ಬೃಹತ್ ಗ್ರಂಥ, 25 ಲಕ್ಷ ರೂಪಾಯಿ ವೆಚ್ಚದಲ್ಲಿ ನಿರ್ಮಾಣವಾದ 'ಕನ್ನಡ ಭವನ' ಇತ್ಯಾದಿಗಳೂ ಸಂಘದ ಹೆಗ್ಗುರುತುಗಳು.

ಈಗ ತನ್ನ ಮಣ್ಣಿನಲ್ಲಿಯೇ ಹುಟ್ಟಿ ಇಡೀ ನಾಡು ಮಾತ್ರವಲ್ಲ, ದೇಶ ವಿದೇಶಗಳಲ್ಲಿಯೂ ಹೆಸರು ಮಾಡಿದ ವಿವಿಧ ಕ್ಷೇತ್ರಗಳ ಸಾಧಕರನ್ನು ತುಂಬು ಪ್ರೀತಿಯಿಂದ ಆಪ್ತವಾಗಿ ಪರಿಚಯಿಸುವ ಕೆಲಸವನ್ನು ಹಲವು ಲೇಖಕರು ಯಾವ ಪ್ರತಿಫಲಾಪೇಕ್ಷೆಯಿಲ್ಲದೆ ಇಲ್ಲಿ ಮಾಡಿದ್ದಾರೆ. ಅಚ್ಚರಿಯ ಮಾತು ಎಂದರೆ ಒಂದು ಜಿಲ್ಲೆ ಎಷ್ಟೊಂದು ಜನ 'ಪುಣ್ಯ ಪುರುಷ'ರನ್ನು ಸಮಕಾಲೀನ ಸಂದರ್ಭದಲ್ಲಿಯೇ ಸೃಷ್ಟಿ ಮಾಡುತ್ತದೆ ಎಂಬುದಕ್ಕೆ ಈ ಮಾಲಿಕೆ ಒಂದು ದೊಡ್ಡ ನಿದರ್ಶನ.

ಅನೇಕ ಸಾರಿ ನಮಗೆ ನಮ್ಮ ಇತಿಹಾಸ ಮಾತ್ರವಲ್ಲ, ವರ್ತಮಾನದ ಬೆಳವಣಿಗೆಗಳ ಪರಿಚಯವೂ ಇರುವುದಿಲ್ಲ. ಆ ಹಿನ್ನೆಲೆಯಲ್ಲಿ ನಮ್ಮ ಸುತ್ತಲೂ ಯಾವ ಯಾವ ಕ್ಷೇತ್ರದಲ್ಲಿ ಯಾರು ಏನೇನು ಕೆಲಸ ಮಾಡಿದರು, ಮಾಡಬಹುದು ಎಂಬುದಕ್ಕೂ ಈ ಮಾಲಿಕೆ 'ಮಾದರಿಗಳನ್ನು' ಒದಗಿಸುತ್ತದೆ. ಹಾಗಾಗಿಯೇ ಇದು ಸಂಗ್ರಹಯೋಗ್ಯ ಮಾಲಿಕೆ.

ರಾಜ್ಯದ ಇತರ ಜಿಲ್ಲೆಗಳಲ್ಲಿಯೂ ಇಂಥದೇ ಸಾಧಕರು ಇದ್ದಾರೆ. ಕರ್ನಾಟಕ ಆ ದೃಷ್ಟಿಯಿಂದ 'ಬಹುರತ್ನಾ ವಸುಂಧರಾ'. ಕಾಂತಾವರ ಕನ್ನಡ ಸಂಘದ ಕಾರ್ಯಾಧ್ಯಕ್ಷರಾದ ಹಾಗೂ ಮಾಲೆಯ ಗೌರವ ಸಂಪಾದಕರಾದ ಡಾ. ನಾ. ಮೊಗಸಾಲೆ ಅವರು ಹೇಳಿದ ಹಾಗೆ ಎಲ್ಲವನ್ನೂ ಸರ್ಕಾರ ಅಥವಾ ಅಕಾಡೆಮಿ ಮಾಡಬೇಕು ಎಂದು ನಿರೀಕ್ಷಿಸುತ್ತ ಕುಳಿತರೆ ಆಗದು. ನಾಡಿನಾದ್ಯಂತ ಇರುವ ಸ್ಥಳೀಯ ಕನ್ನಡ ಸಂಘಟನೆಗಳು, ಕಾಂತಾವರದ ಹಾದಿಯಲ್ಲಿ ನಡೆದರೆ ಸುವರ್ಣ ಕರ್ನಾಟಕದ ಆಚರಣೆ ನಿಜಕ್ಕೂ ಚಿನ್ನದ ಹಬ್ಬವೆನಿಸಲು ಸಾಧ್ಯ.

ಪದ್ಮರಾಜ ದಂಡಾವತಿ

---

೩ ಜೂನ್ ೨೦೦೭ರ 'ಪ್ರಜಾವಾಣಿ' ಸಾಪ್ತಾಹಿಕ ಪುರವಣಿ*

ಹೊಸಗನ್ನಡ ಸಾಹಿತ್ಯದಲ್ಲಿ ದಕ್ಷಿಣ ಕನ್ನಡದ ಎರಡನೇ ತಲೆಮಾರಿನ ಬರಹಗಾರರಲ್ಲಿ ಪ್ರಮುಖರಾದ ಕುಡ್ವಿ ವಾಸುದೇವ ಶೆಣೈ ಅವರ ಕೊಡುಗೆ ಅನನ್ಯವಾದುದು. ಕತೆಗಾರರಾಗಿ, ನಾಟಕಕಾರರಾಗಿ, ವಿನೋದ ಮತ್ತು ವಿಡಂಬನಾ ಸಾಹಿತ್ಯದ ರಚನಕಾರರಾಗಿ, ಪತ್ರಿಕೋದ್ಯಮಿಯಾಗಿ, ರಂಗಪ್ರಯೋಗ ಕರ್ತರಾಗಿ ಕನ್ನಡ ಸಾಹಿತ್ಯದ ಆಳ ಅಗಲವನ್ನು ಸದ್ದಿಲ್ಲದೆ ವಿಸ್ತರಿಸಿದ ಹಿರಿಯರು ಅವರು. ಕನ್ನಡ ಓದುಗ ವಲಯವನ್ನು ಬೆಳೆಸುವಲ್ಲಿ, ಸಾಹಿತ್ಯವನ್ನು ಓದುಗರ ಬಳಿ ಕೊಂಡೊಯ್ಯುವಲ್ಲಿ, ಹೊಸ ತಲೆಮಾರಿನ ಲೇಖಕರ ಪಡೆಯನ್ನು ನಿರ್ಮಾಣ ಮಾಡುವಲ್ಲಿ, ತನಗಿಂತ ಹಿರಿಯ ಕಿರಿಯ ಮತ್ತು ಸಮಕಾಲೀನ ಬರಹಗಾರರನ್ನು ಒಗ್ಗೂಡಿಸುವಲ್ಲಿ ಅವರ ಕಾಯಕ ದೊಡ್ಡದು. ಅವರ ಜೀವನ ನಿಷ್ಠೆ, ಪ್ರಾಮಾಣಿಕತೆ ಮತ್ತು ಶ್ರದ್ಧೆ ಇಂದು ಕನ್ನಡ ಕಟ್ಟುವವರ ಮುಂದೆ ಹಚ್ಚಿಟ್ಟ ನಂದಾದೀಪ.

*********



"ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಣ್ಣಕತೆಗಳ ಹುಟ್ಟು ಮತ್ತು ಬೆಳವಣಿಗೆ" ಎಂಬ ವಿಷಯದಲ್ಲಿ ಪಿಹೆಚ್.ಡಿ. ಪದವಿ ಪಡೆದಿರುವ ಡಾ. ಸಬಿಹಾ ಭೂಮಿ ಗೌಡ ಅವರು ಮಂಗಳೂರು ವಿವಿಯಲ್ಲಿ ಕನ್ನಡ ಪ್ರಾಧ್ಯಾಪಕರು. ಭಾಷಾವಿಜ್ಞಾನ, ಸಾಹಿತ್ಯ ವಿಮರ್ಶೆ, ಹೊಸಗನ್ನಡ ಸಾಹಿತ್ಯ, ಮಹಿಳಾ ಅಧ್ಯಯನ ಕ್ಷೇತ್ರಗಳು ಇವರ ಆಸಕ್ತಿಯವುಗಳಷ್ಟೇ ಅಲ್ಲ, ಅವುಗಳಲ್ಲಿ ಅವರಿಗೆ ವಿಶೇಷ ಪರಿಶ್ರಮವೂ ಇದೆ. ಮಂಗಳೂರಿನ ಅನೇಕ ಸಂಘ ಸಂಸ್ಥೆಗಳಲ್ಲಿ ವಿವಿಧ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿರುವ ಅವರು ಪ್ರಕೃತ ಮಂಗಳೂರು ವಿವಿಯಲ್ಲಿರುವ ಡಾ। ಶಿವರಾಮ ಕಾರಂತ ಪೀಠದ ನಿರ್ದೇಶಕರಾಗಿದ್ದಾರೆ.

ಸರಸ್ವತಿ ಬಾಯಿ ರಾಜವಾಡೆ ಅವರ ಆಯ್ದ ಕತೆಗಳು, 'ನಾವು ಮತ್ತು ನಮ್ಮ ಪರಿಸರ', 'ಕರಾವಳಿಯ ಕತೆಗಳು', 'ಕನ್ನಡ ಸಾಹಿತ್ಯ ಮತ್ತು ಮಹಿಳೆ', 'ಮಹಿಳಾ ಸಾಹಿತ್ಯ ಚರಿತ್ರೆ' ಎಂಬ ಕೃತಿಗಳ ಸಂಪಾದನೆಯ ಜೊತೆ, 'ಚಿತ್ತಾರ' (ಕವನ ಸಂಗ್ರಹ), 'ಕಡಲ ತಡಿಯ ಮನೆ' (ಕಥಾ ಸಂಗ್ರಹ) 'ನುಡಿಗವಳ', 'ಕನ್ನಡ ಭಾಷಾ ಪ್ರವೇಶ' ಮೊದಲಾದ ಹಲವು ಕೃತಿಗಳನ್ನು ಅವರು ಪ್ರಕಟಿಸಿದ್ದಾರೆ.




ಇದು ಕಾಂತಾವರ ಕನ್ನಡ ಸಂಘದ ನಾಡಿಗೆ ನಮಸ್ಕಾರ –
ಸಾಹಿತ್ಯ ಸಂಸ್ಕೃತಿ ಚಿಂತನ ಗ್ರಂಥಮಾಲೆಯ ಹದಿನೆಂಟನೆಯ ಕುಸುಮ.

ಅಧಿಕೃತ ಮಾರಾಟಗಾರರು :
**ಜ್ಞಾನಗಂಗಾ ಪುಸ್ತಕ ಮಳಿಗೆ**
ಪ್ರವಾಸಿ ಮಂದಿರದ ಎದುರು, ದರ್ಬೆ, ಪುತ್ತೂರು – 574202, (ದ.ಕ)
ದೂರವಾಣಿ : 08251 – 232421